ಪ್ರಕಟಿಸುವಂತೆ ಮಾಡಿರುವ ಚಾಣಾಕ್ಷತನದ ದೃಶ್ಯವಾಗುವದು.

ಜ್ಞಾನ ಪ್ರಕಾಶನದಲ್ಲಿ ವ್ಯಕ್ತಿಯು ಅಯೋಗ್ಯತೆ ಅಜ್ಞಾನಗಳು ತಿಮಿರವಾದರೆ ವಿಶ್ವವಿದ್ಯಾಲಯದ ಘನ ಸಂಸ್ಥೆಗಳಲ್ಲಿ ಅವು ಅಂಧಕಾಸುರನಂತೆ ಘೋರ ಪರಿಣಾಮ ಬೀರುವುದರ ನಿದರ್ಶನಗಳು ಉಂಟು.

# ಅಂಜನ

## ಮುಕ್ತಿಕಂಠಾಭರಣ ದ

# ವಿಮರ್ಶೆ

ಇದೇ ಲೇಖಕರಿಂದ

೧. ಪುಸ್ತಕಭಾಂಡಾರ ಕಾಯದೆ.
(ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟನೆ)

೨. ಮೈಸೂರು ಪುಸ್ತಕಭಾಂಡಾರ ಕಾಯದೆ. (ಪ್ರತಿಗಳು ತೀರಿವೆ)

೩. ನಮ್ಮ ಪುಸ್ತಕಭಾಂಡಾರ. ( ,, )

೪. ಪುಸ್ತಕಭಾಂಡಾರ ಸೇವೆ.

೫. ಗ್ರಂಥಸೂಚಿ ಮತ್ತು ಪುಸ್ತಕಶಾಸ್ತ್ರ.

೬ Bibliography : Technical.

೭. Bibliographic Review.

೮. Reader Orientaion & Transliterating.

---

# ಅಂಜನ

## ಮುಕ್ತಿಕಂಠಾಭರಣ ದ

## ವಿಮರ್ಶೆ


**ಗುರುಲಿಂಗಪ್ಪ ಮಲ್ಲಪ್ಪ ಪಾಟೀಲ**

ರಿಟಾಯರ್ಡ ಕ್ಯೂರೇಟರ ಆಫ್ ಲಾಯಬ್ರರೀಜ





ಧಾರವಾಡ

೧೯೭೨




ಬೆಲೆ ರೂ. ೪–೦೦
ಕ್ಯಾಲಿಕೋ ಪ್ರತಿ ರೂ. ೫–೦೦
ಪ್ರತಿಗಳು ೫೦೦



ಪ್ರಕಾಶಕರು :

ಕಿತ್ತೂರು ಸಂಸ್ಥಾನದ ರಾಜಗುರು ಶ್ರೀ ಮ.ನಿ.ಪ್ರ. ಶ್ರೀ ಚನ್ನಬಸವ ಸ್ವಾಮಿಗಳು ಕಲ್ಮಠ, ಕಿತ್ತೂರು, ಅಧ್ಯಕ್ಷರು, ಕಿತ್ತೂರು ಕಲ್ಮಠ ಟ್ರಸ್ಟ (ಚನ್ನಮ್ಮಾ ಕಿತ್ತೂರು) ಜಿ. ಬೆಳಗಾಂವ.

ಮುದ್ರಕರು :

ಪಿ. ಯು. ಕೋರೆ, ಎಮ್. ಎ., ಬಿ. ಟಿ., ಸುಪರಿಂಟೆಂಡೆಂಟ
ತೋಂಟದಾರ್ಯ ಮುದ್ರಣಾಲಯ, ಧಾರವಾಡ.

ಸಮರ್ಪಣೆ






ಗ್ರಂಥವೆ
ಗುರು

ಜ್ಞಾನವೆ
ಜಂಗಮ

“ಜ್ಞಾನದ ಬಲದಿಂದ ಅಜ್ಞಾನದ
ಕೇಡು ನೋಡಯ್ಯ
ಜ್ಯೋತಿಯ ಬಲದಿಂದ ತಮಂಧದ
ಕೇಡು ನೋಡಯ್ಯ”

ಜಗದಣ್ಣ ಬಸವಣ್ಣ

# ಪರಿವಿಡಿ


| | | |
|---|---|---|
| O | ಅರಿಕೆ | ೮ |
| A | ನಿವೇದನೆ | ೯ |
| B | ಗ್ರಂಥ | ೨೮ |
| C | ಗ್ರಂಥಕರ್ತ | ೪೧ |
| D | ಸಂಪಾದನಾ ಕಾರ್ಯ | ೪೯ |
| E | ವಚನ–ಕಾದಂಬರಿ–ನಾಟಕ (ಗತಿ–ಮತಿ) | ೭೦ |
| F | ಮುಕ್ತಿಕಂಠಾಭರಣ | ೮೬ |
| G | ಪರಿಕ್ರಮ | ೧೦೪ |
| H | ಮೌಲ್ಯಮಾಪನ | ೧೧೧ |
| I | ಅಂಜನ | ೧೨೨ |


## ಪರಿಶಿಷ್ಟ


| | | |
|---|---|---|
| I | Letter of the Vice.Chancellor | ೧೩೮ |
| II | Letter to the ,, | ೧೩೯ |
| III | -do- | ೧೪೮ |
| IV | -do- | ೧೫೦ |
| ಶುದ್ಧಿಪತ್ರಿಕೆ | | ೧೫೨ |
| ಗ್ರಂಥಸೂಚಿ | | ೧೫೩ |


—

# ೦ ಅರಿಕೆ

ವಿಮರ್ಶೆಯು ವಾಙ್ಮಯ ನಿರ್ಮಾಣ ಹಾಗು ಮೌಲ್ಯಮಾಪನ ಕಾರ್ಯದಲ್ಲಿ ಅಗತ್ಯವಾಗಿದೆ. ಅದು ಜ್ಞಾನದ ಗುಣ ಶೀಲ ಯೋಗ್ಯತೆಗಳನ್ನು ನಿದರ್ಶಿಸುವುದಲ್ಲದೆ ವಾಙ್ಮಯದ ಗುಣಮಟ್ಟವನ್ನು ಕಾಪಾಡುವುದು; ಮೇಲಾಗಿ ಉತ್ತಮ ವಾಙ್ಮಯದ ಉದ್ಭವದಲ್ಲಿ ಅದು ಮಾರ್ಗದರ್ಶಕ ಹಾಗು ಪ್ರೇರಕ ಶಕ್ತಿಯಾಗಿದೆ. ಇಂತಹ ವಿಮರ್ಶಾತ್ಮಕ ಗ್ರಂಥಗಳು ಉದಯವಾದಷ್ಟು ವಾಙ್ಮಯದ ಶುಚಿ ಶುದ್ಧಿ ದೋಷರಾಹಿತ್ಯಗಳ ದೃಷ್ಟಿಯಿಂದ ಒಳ್ಳೆಯದು.

ವಾಙ್ಮಯದ ಉದ್ಭವದಲ್ಲಿ ವಿಮರ್ಶೆಯ ಪಾತ್ರ ಹಿರಿದಾಗಿದೆ. ಅದು ವಾಙ್ಮಯದ ಗತಿ ಮತಿಯನ್ನು ನಿದರ್ಶಿಸುತ್ತದೆ. ಸೃಜನಾತ್ಮಕ ವಾಙ್ಮಯ ದೊಂದಿಗೆ ವಿಮರ್ಶಾತ್ಮಕ ಸಾಹಿತ್ಯವೂ ಹುಟ್ಟಿದುದರಿಂದ ಸಂಸ್ಕೃತ ವಾಙ್ಮಯವು ಅಜರಾಮರವಾಗಿದೆ.

ಇದರಲ್ಲಿಯ ವಿಮರ್ಶೆಯು ಬರಿ ಟೀಕೆಯಾಗಿಲ್ಲ. ಅದು ವಿಧಾಯಕ ರೀತಿಯನ್ನೊಳಗೊಂಡಿದೆ. ಅದನ್ನು ವಿವಿಧ ಬಗೆಯಲ್ಲಿ 'ನಿವೇದನೆ' ಅಧ್ಯಾಯ ದಲ್ಲಿ ನಿರೂಪಿಸಲಾಗಿದೆ. ಇದರಲ್ಲಿ ನನ್ನ ವಿಶೇಷ ಜ್ಞಾನ ಪರಿಣತಿ ಅನುಭವ ವಿಶ್ಲೇಷಣಾತ್ಮಕ ಸಂಶೋಧನವಿಧಾನ ವಿವೇಚನೆ ಇವೆಲ್ಲವೂ ಒಡಮೂಡಿವೆ. ಇವೆಲ್ಲವೂ ದುಷ್ಟಸಾಹಿತ್ಯ ದಮನ ಕಾರ್ಯದಲ್ಲಿ ಉದ್ಯುಕ್ತವಾಗಿವೆ.

ಈ ಗ್ರಂಥ ಪ್ರಕಾಶನ ಕಾರ್ಯದಲ್ಲಿ ಸುಹೃದಯಿಗಳು ಅನಾಮಧೇಯ ರಾಗಿ ಹಾಗು 'ಮಾಡಿದೆನೆಂಬುದು ಮನದಲಿ ಹೊಳೆದರೆ ಏಡಿಸಿ ಕಾಡಿತ್ತು ಶಿವನ ಡಂಗುರ' ಎಂಬ ಬಸವಣ್ಣನವರ ಭಕ್ತಿಭಾವನೆಯಿಂದ ಆರ್ಥಿಕ ನೆರವು ನೀಡಿದ್ದಾರೆ. ಅವರೆಲ್ಲರಿಗೆ ನನ್ನ ಕೃತಜ್ಞತೆಗಳು. ಈ ಗ್ರಂಥಪ್ರಕಾಶನವನ್ನು ಆಶೀರ್ವದಿಸಿ ಹೊಣೆ ಹೊತ್ತುಕೊಂಡುದಕ್ಕಾಗಿ ಕಿತ್ತೂರ ಸಂಸ್ಥಾನದ ರಾಜಗುರುಪೀಠಸ್ಥರಾದ ಶ್ರೀ ನಿ. ಪ್ರ. ಸ್ವ. ಚನ್ನಬಸವಸ್ವಾಮಿಗಳು, ಕಲ್ಮಠ ಇವರಿಗೆ ಆಭಾರಿಯಾಗಿದ್ದೇನೆ.

ಅಂತೆಯೆ ಈ ಪುಸ್ತಕವನ್ನು ಅಂದವಾಗಿ ಹಾಗು ಸಕಾಲದಲ್ಲಿ ಮುದ್ರಿಸಿ ಕೊಟ್ಟ ತೋಂಟದಾರ್ಯ ಪ್ರೆಸ್ಸಿನ ಸುಪರಿಂಟೆಂಡೆಂಟರಾದ ಶ್ರೀ ಪಿ. ಯು. ಕೋರೆ, ಎಂ. ಎ., ಬಿ. ಟಿ. ಇವರಿಗೆ ಋಣಿಯಾಗಿದ್ದೇನೆ.

ಧಾರವಾಡ, ೧-೧೨-೧೯೭೨ **ಜಿ. ಎಂ. ಪಾಟೀಲ**

# A ನಿವೇದನೆ

## A1 ಅಗತ್ಯ

ಇದು ಕರ್ನಾಟಕ ವಿಶ್ವವಿದ್ಯಾಲಯದವರು ೧೯೭೧ ರಲ್ಲಿ ಸಂಪಾದಿಸಿ ಪ್ರಕಟಿಸಿದ ಮುಕ್ತಿಕಂಠಾಭರಣ ಗ್ರಂಥದ ವಿಮರ್ಶೆಯಾಗಿದೆ. ವಿಮರ್ಶೆಯು ಈ ಅಂಶಗಳಲ್ಲಿ ಅಪೂರ್ವವಾಗಿದೆ. (1) ಒಂದು ವಿಶ್ವವಿದ್ಯಾಲಯದ ಪ್ರಕಟನೆಯನ್ನು ಸ್ಥೂಲವಾದರೂ ಸಮಗ್ರವಾಗಿ ಈ ಮೊದಲು ವಿಮರ್ಶೆ ಮಾಡಿದುದು ಕಂಡುಬರುವುದಿಲ್ಲ, (2) ಆಡಳಿತೆಯ ಅವ್ಯವಸ್ಥೆ ದುರವಸ್ಥೆಗಳಿಗೆ ಪಕ್ಕಾಗಿ ಒಂದು ಆಯೋಗದ ಪರಿಶೀಲನೆಗೆ ವಿಶ್ವವಿದ್ಯಾಲಯಗಳು ಗುರಿಯಾಗುತ್ತಿದ್ದರೂ ಅವುಗಳ ಗ್ರಂಥಗಳ ಗುಣ ಶೀಲ ಯೋಗ್ಯತೆಗಳ ಕುರಿತು ಪರಿಶೀಲನಾ ಸಮಿತಿಯನ್ನು ನಿಯಮಿಸಿ ಅವುಗಳನ್ನು ಒಡೆದು ನೋಡಿಲ್ಲ: ಅಂತಹದನ್ನು ವೈಯಕ್ತಿಕ ಪ್ರಯತ್ನದಿಂದ ಸಾಧಿಸಲಾಗಿದೆ, (3) ವಿಮರ್ಶೆಯ ರೀತಿ ಆಧುನಿಕವಾಗಿದೆ. ಅದಕ್ಕೆ ಪಾರ್ಕಿನಸನ್ನನ ಸೂತ್ರಗಳು ಮಾರ್ಗದರ್ಶನ ನೀಡಿವೆ, (4) ದುಃಶೀಲವಾದ ದುಷ್ಟವಾದ ಪ್ರಕಟವಾಗಬಾರದ (ಗ್ರಂಥಕರ್ತನೇ ಪ್ರಕಟಿಸಬಾರದೆಂದು ಶಾಪ ನುಡಿದಿದ್ದಾನೆ) ಗ್ರಂಥವನ್ನು ಪ್ರಕಟಿಸಿದ ಕಾರಣ ಈ ವಿಮರ್ಶೆಯು ಅಗತ್ಯವಾಗಿದೆ, (5) ಇದು ಒಂದು ವಿಚಾರಣಾ ಸಮಿತಿಯು ಮಾಡಬಹುದಾದ ಕಾರ್ಯವಾಗಿದೆ, (6) ಈ ವಿಮರ್ಶೆಯಲ್ಲಿ ನನ್ನ ಪರಿಣತ ಜ್ಞಾನ ಅನುಭವ ಹಾಗು ಅರಿವುಗಳು ಇದರಲ್ಲಿ ಮೈಗೊಂಡಿವೆ.

## A2 ಪೂರ್ವಗ್ರಹ

ಹೀಗೆ ಮಾಡಿದುದಕ್ಕೆ ಈ ವಿಮರ್ಶೆಯು ಪೂರ್ವಗ್ರಹದೂಷಿತವಾಗಿದೆಯೆಂದು ಮತ್ತು ಕರ್ನಾಟಕ ವಿಶ್ವವಿದ್ಯಾಲಯದ ಬಗೆಗೆ ಸುಹೃದಯತೆ ಸದಭಿಮಾನ ಇಲ್ಲವೆಂದು ಸಂಬಂಧಿಸಿದವರು ಹೇಳಬಹುದು. ಹಾಗೇನಾದರೂ ಹೇಳಿದರೆ ವ್ಯರ್ಥ ಪ್ರಚಾರವಾದಿತೇ ಹೊರತು ವಸ್ತುಸ್ಥಿತಿಯ ನಿರೂಪಣೆ

ಯಾಗಲಾರದು. ಏಕೆಂದರೆ ನಾನು ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾಕಷ್ಟು ಮಟ್ಟಿಗೆ ವಾಙ್ಮಯ ಸೇವೆ ಸಲ್ಲಿಸಿರುವೆನು. ಹೇಗಂದರೆ, ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನೆಗಾಗಿ 'ಪುಸ್ತಕಭಾಂಡಾರ ಕಾಯದೆ' ಗ್ರಂಥವನ್ನು ಬರೆದುಕೊಟ್ಟಿರುವೆನು. ಇದು ಅಭ್ಯಾಸಿಗರಿಗೆ ಮಹತ್ವದ ಹಾಗು ಚಿರಗಹನ ಗ್ರಂಥವಾಗಿದೆ. ಇದರ ಎರಡನೆ ಆವೃತ್ತಿಯು (೫೦೦೦ ಪ್ರತಿ) ಇದೀಗ ಪ್ರಕಟವಾಗಿದೆ. ಇದಲ್ಲದೆ 'ಕನ್ನಡ ವರ್ಣಮಾಲೆಯಲ್ಲಿ ಸೊನ್ನೆ' ಎಂಬ ಮಹತ್ವಪೂರ್ಣವಾದ ಹಾಗು ಸಂಶೋಧನೆ ಜನಿತವಾದ ನನ್ನ ಲೇಖನವು ಕರ್ನಾಟಕ ಯುನಿವ್ಹರ್ಸಿಟಿ ಜರ್ನಲ (೧೯೬೬) ದಲ್ಲಿ ಪ್ರಕಟವಾಗಿದೆ. ಇದು ವರ್ಣಾನುಕ್ರಮ ಜೋಡಣೆಯ ಕುರಿತು ಸೊನ್ನೆಗೆ ಒಂದು ನಿರ್ದಿಷ್ಟ ಸ್ಥಾನವನ್ನು ಕಲ್ಪಿಸಿರಲಾರದ ಮೂಲಕ ಗಣ್ಯವಾದ ಕನ್ನಡ ನಿಘಂಟುಗಳಲ್ಲಿ ವರ್ಣಾನುಕ್ರಮ ಜೋಡಣೆಯು ಹೇಗೆ ಭಿನ್ನ ಭಿನ್ನ ಹಾಗು ಗೊಂದಲಮಯವಾಗಿದೆ ಎಂಬುದನ್ನು ನಿರೂಪಿಸಿ ಒಂದು ನಿರ್ದಿಷ್ಟ ಹಾಗು ಶಾಸ್ತ್ರೀಯ ಕ್ರಮವನ್ನು ಸೂಚಿಸಿದೆ.

## A3 ಪ್ರಕಟನೆ

ಇದಲ್ಲದೆ ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನೆಗಳಲ್ಲಿ ತಾಂತ್ರಿಕ ವಿಜ್ಞಾನದ ಲೋಪದೋಷಗಳಿರಬಾರದು, ಆ ಮೂಲಕ ಕಲಂಕಿತವಿರಬಾರದು, ಅವು ಜ್ಞಾನ ಪ್ರಭೆ ಪ್ರತಿಭೆಗಳಿಂದ ಶೋಭಿತವಾಗಿರಬೇಕು ಎಂಬ ಕಾರಣದಿಂದ ಅವುಗಳಲ್ಲಿ ಕಂಡುಬರುವ ದೋಷಗಳನ್ನು ಎತ್ತಿ ಹೇಳಿ ಮಾರ್ಗದರ್ಶನ ನೀಡಿ ಮತ್ತು ಅವುಗಳನ್ನೇ ಆಧರಿಸಿ ಸೂತ್ರವಿಡಿದು ಈ ಪುಸ್ತಕಗಳನ್ನು– (1) Bibliography : Technical (2) Bibliographic Review (3) Reader Orientation and Transliterating (4) ಗ್ರಂಥಸೂಚಿ ಮತ್ತು ಪುಸ್ತಕಶಾಸ್ತ್ರ—ರಚಿಸಿ ಪ್ರಕಟಿಸಿದ್ದೇನೆ.

### A31 ದೋಷಗಳು

ಆದಾಗ್ಯೂ ಕರ್ನಾಟಕ ವಿಶ್ವವಿದ್ಯಾಲಯದ ಪಂಡಿತರು ಬರೆಹಗಾರರು ಇವನ್ನು ಅಭ್ಯಸಿಸುವ ಮನನ ಮಾಡುವ ಗುಣ ಯೋಗ್ಯತೆಗಳನ್ನು ತೋರಿಸಿಲ್ಲ.

ಬಹುಶಃ ಅವರ ಅಹಮಹಮಿಕೆ ಅಧ್ಯತೆ ಇವುಗಳಿಂದಾಗಿ ಕರ್ನಾಟಕ ವಿಶ್ವವಿದ್ಯಾಲಯದ ಕೆಲವು ಪ್ರಕಟನೆಗಳು ದೋಷಯುಕ್ತ ದೋಷಪೂರ್ಣವಾಗುತ್ತ ಹೊರಟವೆಯೇ ಹೊರತು ಸುಧಾರಿಸಿಕೊಳ್ಳುವ ಪ್ರವೃತ್ತಿಯನ್ನು ಬುದ್ಧಿಯನ್ನು ತೋರಿಸಿಲ್ಲ; ಒಟ್ಟಾರೆ ಗುಣಗ್ರಾಹಕತೆಯ ಅಭಾವವಿದೆ ಎಂದರೂ ಅಡ್ಡಿಯಿಲ್ಲ. ಮೇಲಿನವುಗಳಂತೆ ಈ ವಿಮರ್ಶಾ ಗ್ರಂಥವಾದರೂ ಕರ್ನಾಟಕ ವಿಶ್ವವಿದ್ಯಾಲಯದ ಬರೆಹ ಹಾಗು ಸಂಪಾದಕ ವರ್ಗದವರಿಗೆ ಯುಕ್ತ ಹಾಗು ಯಥಾರ್ಥ ಜ್ಞಾನವನ್ನು ಒದಗಿಸುವ ಉದ್ದೇಶದಿಂದಲೇ ರಚಿತವಾಗಿದೆ.

## A4 ಜ್ಞಾನಬೋಧೆ

ಪೂರ್ವಕಾಲದಲ್ಲಿಯಂತೆ ಜ್ಞಾನಬೋಧೆಯು ಸಂಪೂರ್ಣವಾಗಿ ವಸ್ತುನಿಷ್ಠವಾಗಿಲ್ಲ; ಅದರಲ್ಲಿ ಸ್ವಯಂಪ್ರಕಟವಾಗುವ ಪ್ರೇರಣೆ ಇಲ್ಲವೆ ಉತ್ಕಟತೆ ಇಲ್ಲ. ಪರಿಸ್ಥಿತಿ ಜನ್ಯವಾಗಿ ಅದರ ಮೇಲೆ ಆಘಾತಗಳು ಹಾಗು ಪ್ರಭಾವಗಳು ಉಂಟಾಗಹತ್ತಿವೆ. ಈ ಕಾರಣ ಜ್ಞಾನಬೋಧೆಯ ಮಾಧ್ಯಮವಾದ ಗ್ರಂಥ ಪ್ರಕಟನೆಯಲ್ಲಿ ಅನೇಕ ಕುಂದು ಕೊರತೆಗಳು ಕಂಡುಬರುತ್ತವೆ. ಇದಕ್ಕೆ ಕಾರಣಗಳು.—(1) ಜ್ಞಾನವನ್ನರುಹಬೇಕೆಂಬ ಉನ್ನತಾಕಾಂಕ್ಷೆಗಿಂತ ಗ್ರಂಥ ಪ್ರಕಾಶನದಲ್ಲಿ ಒದಗುವ ಆರ್ಥಿಕ ಲಾಭದ ಪ್ರೇರಣೆ (2) ಆವಶ್ಯವಾದ ಗುಣಯೋಗ್ಯತೆಗಳಿಲ್ಲದೆ ಸ್ಥಾನಬಲದಿಂದ ಕರ್ತವ್ಯಭಾವದಿಂದ ಪ್ರಚಾರ ಬುದ್ಧಿಯಿಂದ ಗ್ರಂಥಪ್ರಕಾಶನ (3) ಅಲ್ಪಜ್ಞಾನ ಅಲ್ಪಪರಿಶ್ರಮದಿಂದ ಧನ ಫಲ ಪದವಿ ಹುದ್ದೆಗಳನ್ನು ದೊರಕಿಸಬೇಕೆಂಬ ಹಂಬಲ ಹಾಗು ಪ್ರಯತ್ನ (4) ಅಧಿಕಾರ ಸ್ಥಾನದಿಂದ ಬಲದಿಂದ ಪ್ರಕಟಿತವಾದುದು ಏನಾದರೂ ಎಂತಹದಾದರೂ ಹೇಗಾದರೂ ಪ್ರಸಿದ್ಧಿಯನ್ನು ದೊರಕಿಸುವುದು ಎಂಬ ಭಾವನೆ (5) ಅವುಗಳಲ್ಲಿಯ ಲೋಪದೋಷಗಳು ಬೆಳಕಿಗೆ ಬರುವುದಿಲ್ಲ; ಬೆಳಕಿಗೆ ತರಲು ಯಾರೂ ಪ್ರಯತ್ನಿಸುವುದಿಲ್ಲ; ಒಂದು ವೇಳೆ ಹಾಗೆ ಏನಾದರೂ ಘಟಿಸಿದರೆ ಅವುಗಳನ್ನು ಲಕ್ಷಿಸಬೇಕಾಗಿಲ್ಲ; ಮೇಲಧಿಕಾರಿಗಳ ಗಮನಕ್ಕೆ ಬಂದರೆ

ಸ್ಥಾನಬಲದಿಂದ ಹಾಗು ಏನಾದರೂ—ಅದು ಅಭಿಪ್ರಾಯದ ಮಾತು ಎಂದು—ಹೇಳಿ ದಕ್ಕಿಸಿಕೊಳ್ಳಬಹುದೆಂಬ ಆತ್ಮವಿಶ್ವಾಸ.

## A41 ನಿದರ್ಶನ

ಮೇಲೆ ಹೇಳಿದವು ಬರೀ ಊಹಾತ್ಮಕ ಇಲ್ಲವೆ ವಿಚಾರವಾದ ಎಂದು ಸುಮ್ಮನಿರಬೇಕಾಗಿಲ್ಲ. ಅದಕ್ಕೆ ನಿದರ್ಶನಗಳು ಉಂಟು. ಈ ಮೊದಲು ಉಲ್ಲೇಖಿಸಿದ ಪುಸ್ತಕಗಳು ಇಂತಹ ಅನೇಕ ನಿದರ್ಶನಗಳನ್ನು ಒದಗಿಸುತ್ತವೆ. ಉಲ್ಲೇಖಿಸಬೇಕಾದರೆ ೧೯೬೭ ರಿಂದ ನಡೆದ ನನ್ನ ಗ್ರಂಥಪ್ರಕಾಶನವನ್ನು ಅರ್ಥಪೂರ್ಣವಾಗಿ ವಿವರಿಸಬೇಕಾಗುತ್ತದೆ. ಆಗ್ಗೆ ನನ್ನ ಪುಸ್ತಕ Bibliography; Technical ಪ್ರಕಟವಾಯಿತು. ಈ ಗ್ರಂಥ ನಿರ್ಮಾಣಕ್ಕೆ ಕರ್ನಾಟಕ ವಿಶ್ವವಿದ್ಯಾಲಯವು ೧೯೬೫ ರಲ್ಲಿ ಪ್ರಕಟಿಸಿದ S'ūnyasampādane Vol. I ಇದು ಕೇಂದ್ರಬಿಂದುವಾಗಿದೆ. ಅದರಲ್ಲಿಯ ಲೋಪದೋಷಗಳನ್ನು ಉದಾಹರಣೆ ಸಹಿತ ಎತ್ತಿ ತೋರಿಸಲಾಗಿದೆ. ಆರು ಸಂಪುಟಗಳಲ್ಲಿ ಹೊರ ಬರಲಿರುವ ಆ ಗ್ರಂಥವು ಇನ್ನು ಮುಂದಿನ ಸಂಪುಟಗಳಲ್ಲಿ ದೋಷರಹಿತವಾಗಿ ಯೋಗ್ಯವಾಗಿ ರಚಿತವಾಗಲೆಂಬ ಉದ್ದೇಶದಿಂದ ನನ್ನ ಗ್ರಂಥವು ರಚಿತವಾಗಿ ಪ್ರಕಟವಾಯಿತು. ಅದರಲ್ಲಿಯ ವಿಷಯಗಳು ಇವಾಗಿವೆ— ಗ್ರಂಥರಚನೆ–ಮೈಕಟ್ಟು, ಸಂದರ್ಭಸೂಚನೆ, ಅಕ್ಷರಾನುಕ್ರಮಜೋಡಣೆ, ಲಿಪ್ಯಾಂತರ ಮತ್ತು ಗ್ರಂಥಸೂಚಿ. ಈ ಗ್ರಂಥದ ಪ್ರಕಾಶನವನ್ನು ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ S'ūnyasampādane ಗ್ರಂಥದ ಹಿನ್ನೆಲೆಯಲ್ಲಿ ಅರುಹಲಾಯಿತು. ಆದರೇನು 'ಜೋರ್ಗಲ್ಲ ಮೇಲೆ ಮಳೆಗರೆದರಾಕಲ್ಲು ನೀರ್ಕುಡಿಯಬಹುದೆ' ಎಂಬಂತೆ ನಿರರ್ಥಕವಾಯಿತು. ಈ ಬಗ್ಗೆ ಒಂದು ಉದಾಹರಣೆ ಮಾತ್ರ ಹೇಳುವೆ. ಏನಂದರೆ S'ūnyasampādane ಸಂಪುಟ ಎರಡರಲ್ಲಿ ಸಂದರ್ಭಸೂಚನೆಗಳನ್ನು ಸುಧಾರಿಸ ಹೋಗಿ ಅಪಹಾಸ್ಯಕ್ಕೆ ಗುರಿಯಾಗಿದ್ದಾರೆ. ಹೇಗಂದರೆ ಪುಟ ೩ರ ಕೆಳಗೆ ಇರುವ ಅಡಿ ಟಿಪ್ಪಣಿ (4–7) ಗಳಲ್ಲಿ ಹೇಗೆಗೋ ಅರಿಯದವರಂತೆ ಅಧ್ಯಾಯ ಪುಟ ಸಾಲುಗಳನ್ನು ಹೇಳಿದ್ದಾರೆ. ಇದು ನಗೆಗೀಡಾದ ಹಾಗೂ ಮೂರ್ಖತನದ ಸಂಗತಿಯಾಗಿದೆ.

## A42 Bibliographic Review

ಅನಂತರ ೧೯೬೯ ರಲ್ಲಿ ನನ್ನ ಪುಸ್ತಕ Bibliographic Review ಪ್ರಸಿದ್ಧವಾಯಿತು. ಇದೂ ಸಹ ಕರ್ನಾಟಕ ವಿಶ್ವವಿದ್ಯಾಲಯದವರ ಗ್ರಂಥ-ರಚನಾ ಕಾರ್ಯದ ಕುರಿತಾಗಿದೆ. ಇದಕ್ಕೆ ಹಿನ್ನೆಲೆಯು ಮೈಸೂರು ಸರಕಾರದವರು ಪ್ರಕಟಿಸಿದ S'ri Basavēs'vara ಪುಸ್ತಕಕ್ಕೆ ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರಿಯೊಬ್ಬರು ತಯಾರಿಸಿದ ಗ್ರಂಥಸೂಚಿ ಮತ್ತು S'ūnysampādane Vol. II ಇವುಗಳ ಗ್ರಂಥಸೂಚಿಗಳಾಗಿವೆ. ಇವನ್ನು ಆ ಪುಸ್ತಕದ ಪ್ಯಾರಾ 06 Bad Instances ದಲ್ಲಿ ಉಲ್ಲೇಖಿಸಲಾಗಿದೆ. S'ūnyasampādane ಸಂಪುಟ ೨ (೧೯೬೮) ಪ್ರಕಟವಾದ ಮೇಲೆ ಅದರ ವಿಮರ್ಶಾತ್ಮಕವಾಗಿ, ಮುಖ್ಯವಾಗಿ ಗ್ರಂಥಸೂಚಿಯ ದೋಷದ ಕುರಿತು, ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ಪತ್ರ ಬರೆದೆನು. ಅದನ್ನು ಪರಿಶೀಲಿಸುವೆವೆಂದು ಉತ್ತರ ಕೊಟ್ಟಿದ್ದಾರೆ. ಆದರೆ ತಿದ್ದಿಕೊಳ್ಳುವ ಪ್ರಯತ್ನವನ್ನೇನೂ ಮಾಡಲಿಲ್ಲ. ಖೇದದ ಸಂಗತಿಯೆಂದರೆ ಗ್ರಂಥಸೂಚಿಕಾರರಿಗೆ ಸೂಚಿಯಲ್ಲಿರುವ ಪದಾರ್ಥ (entity) ವೆಂದರೇನೆಂಬುದು ಗೊತ್ತಿಲ್ಲ; ಅಲ್ಲದೆ ಆರು ಸಂಪುಟಗಳಲ್ಲಿ ಪ್ರಕಟವಾಗಿರುವುದಕ್ಕೆ ಒಂದು cumulated ಸಮಗ್ರ ಸೂಚಿ ಇರಬೇಕಾಗುತ್ತದೆಂಬುದು ಗೊತ್ತು ಇದ್ದಂತೆ ಇಲ್ಲ; ಇದ್ದರೂ ಅದನ್ನು ಲಕ್ಷ್ಯದಲ್ಲಿಟ್ಟುಕೊಂಡಂತೆ ಹಾಗು ಪದಾರ್ಥಗಳು (entities) ಸಂಪುಟದಿಂದ ಸಂಪುಟಕ್ಕೆ ಬದಲಾಗುತ್ತ ಹೋಗಬಾರದು—ಏಕೆಂದರೆ ಸಮಗ್ರ ಸಂಪುಟ ಸೂಚಿಗೆ ವ್ಯತ್ಯಯ ಬರುತ್ತದೆ—ಎಂಬುದನ್ನು ಗಮನಿಸಿದಂತೆ ಕಂಡುಬರುವುದಿಲ್ಲ. ಆದುದರಿಂದ ಈ ಸಂಪುಟಗಳನ್ನು ಪರಿಶೀಲಿಸಿದಾಗ ಈಗ್ಗೆ ಪ್ರತಿಯೊಂದು ಸಂಪುಟಕ್ಕೆ ಮಾಡಿದ ಸೂಚಿಗಳು ನಿರುಪಯುಕ್ತ ನಿರರ್ಥಕವೆನಿಸಿ ವ್ಯರ್ಥ ಸಮಯ ಪರಿಶ್ರಮ ಧನ ಹಾಳು ಎಂದು ಕಂಡುಬರುವುದು. Bibliography, Technical ಪುಸ್ತಕದಲ್ಲಿ ಗ್ರಂಥಸೂಚಿಯನ್ನು ವಿಧಾಯಕ ದೃಷ್ಟಿಯಿಂದ ನಿರೂಪಿಸಿದ್ದರೆ Bibliographic Review ಪುಸ್ತಕದಲ್ಲಿ ನಿಷೇಧಾರ್ಥಕ ನೇತಿ ಮಾರ್ಗದಿಂದ ಇಂಥ ದೋಷಗಳು ಸಂಭವಿಸಬಾರದು ಎಂದು ಹೇಳಿ

ಉದಾಹರಣೆಗಳಿಂದ ಪ್ರಮಾಣಿಸಲಾಗಿದೆ. ಅದರಲ್ಲಿ ಪ್ಯಾರಾ 468 ದಲ್ಲಿ **Silly Entry** ಮೂರ್ಖತನದ ಲೇಖ ಒಂದನ್ನು ಉದಹರಿಸಿದ್ದರೆ ಇಂತಹ ಅನೇಕ ಉದಾಹರಣೆಗಳು ಮುಂದಿನ ಸಂಪುಟಗಳ ಸೂಚಿಯಲ್ಲಿಕಂಡುಬರುವವು. ಇದಕ್ಕೂ ಹೆಚ್ಚಿನ ಖೇದದ ಸಂಗತಿ ಏನೆಂದರೆ S'ūnyasampādane ಯ ಸಂಪುಟ ೧, ೨ ಗಳ ಸೂಚಿಯಲ್ಲಿ Mind ಪದದ ಉಲ್ಲೇಖವು ಬಂದಿದ್ದರೂ 3 ನೆ ಸಂಪುಟದ ಸೂಚಿಯಲ್ಲಿ, ಗ್ರಂಥದಲ್ಲಿ ಆ ಪದವು ಹಲವಾರು ಸಾರೆ ಬಂದಿದ್ದರೂ, ಅದರ ಉಲ್ಲೇಖವೇ ಇಲ್ಲ. ಇಂತಹ ಗಹನ ದೋಷಗಳಿಂದಾಗಿ S'ūnyasampādane ಯ ಗ್ರಂಥಸೂಚಿಯು ನಿರುಪಯುಕ್ತ ಹಾಗು ಅವಿಶ್ವಸನೀಯವೆನಿಸುತ್ತದೆ. ಇದು ವಿಶ್ವವಿದ್ಯಾಲಯದ ಕಾರ್ಯಕ್ಕೆ ಕಲಂಕ ತರುತ್ತದೆ.

## A43 Transliterating

ನಂತರ ೧೯೭೦ ರಲ್ಲಿ ಲಿಪ್ಯಾಂತರ ವಿಷಯವಾಗಿ ನನ್ನ ಪುಸ್ತಕ Reader Orientation and Transliterating ಪ್ರಸಿದ್ಧವಾಗಿದೆ. ಇದೂ ಸಹ ಕರ್ನಾಟಕ ವಿಶ್ವವಿದ್ಯಾಲಯದ ಅಧ್ಯಾಪಕರ, ಈ ವಿಷಯದ ಕುರಿತು, ಅಜ್ಞಾನ ಹಾಗು ಅವಕ್ಷತೆಗಳ ಕುರುಹಾಗಿದೆ. ಅಜ್ಞಾನದ ಘೋರ ತರವಾದ ನಿದರ್ಶನವು ಅವರ ಎರಡು ನಿರ್ಣಯಗಳಿಂದ ಕಂಡುಬರುತ್ತದೆ. ಇವುಗಳನ್ನು ಪುಟ ೫ ರಲ್ಲಿ ಉಲ್ಲೇಖಿಸಲಾಗಿದೆ. ಈ ಸಂಬಂಧದಲ್ಲಿ ತಮ್ಮ ಕುಂದುಗಳನ್ನು ದೋಷಗಳನ್ನು ಮುಚ್ಚಿಕೊಳ್ಳಲು ಅಧ್ಯಾಪಕರು ತಾವು ಲಿಪ್ಯಾಂತರ ಮಾಡುತ್ತಿರುವುದಕ್ಕೆ ಭಾರತೀಯ ಪದ್ಧತಿ ಎಂದು ಮೇಲಧಿಕಾರಿಗಳಿಗೆ ಹೇಳಿದುದಂತೂ ಅಧಮತನವಾಗಿದೆ. ಇದರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಎರಡು ಪ್ರಕಟನೆಗಳಲ್ಲಿ ಹಾಗು ಅದರ ಜರನಲ್ (೧೯೬೮) ದಲ್ಲಿ ಪ್ರಕಟವಾಗಿ ರುವ ಮೂರು ಲೇಖಗಳಲ್ಲಿ ಉಂಟಾಗಿರುವ ದೋಷಗಳನ್ನು ಸ್ಪಷ್ಟವಾಗಿ ಖಂಡಿತವಾಗಿ ಎತ್ತಿ ಹೇಳಲಾಗಿದೆ. ಇದರಿಂದ ಆ ಲೇಖ ಹಾಗು ಪುಸ್ತಕ ಗಳನ್ನು ಬರೆದವರಿಗೆ ಲಿಪ್ಯಾಂತರದ ಸರಿಯಾದ ಜ್ಞಾನವು ಇರದೆ ತೋರಿಕೆಗಾಗಿ ಹಾಗೆ ಮಾಡಲಾಗಿದೆ ಎಂದು ಕಂಡುಬರುವುದು. ಒಂದು ವಿಶ್ವವಿದ್ಯಾಲಯದ

ಅಧ್ಯಾಪಕರಲ್ಲಿರುವ ಅಜ್ಞಾನ ಅಯೋಗ್ಯತೆಗಳು ಖಂಡನೀಯವಾಗಿವೆ, ನಿಂದನೀಯವಾಗಿವೆ. ಏಕೆಂದರೆ ಅವುಗಳಿಂದ ಹಾಗು ಸಂಬಂಧಿಸಿದ ಅಧ್ಯಾಪಕರಿಂದ ಅಜ್ಞಾನವು ಪ್ರಸಾರವಾಗುವುದೇ ಹೊರತು ಜ್ಞಾನವಲ್ಲ; ಅಯೋಗ್ಯತೆಯು ಪ್ರಕಟವಾಗುವುದೇ ಹೊರತು ಗುಣ ಯೋಗ್ಯತೆಗಳು ಅಲ್ಲ. ಇಂತಹವುಗಳಿಂದ ವಿಶ್ವವಿದ್ಯಾಲಯದ ಪ್ರಕಟನಾ ಕಾರ್ಯಗಳ ಗುಣ ಶೀಲ ಯೋಗ್ಯತೆ ಗೌರವಗಳಿಗೆ ಪ್ರಶ್ನಾರ್ಥಕ ಚಿನ್ಹೆ ಮೂಡುತ್ತದೆ.

## A44 ಪುಸ್ತಕಶಾಸ್ತ್ರ

ಇದೇ ಸುಮಾರಿಗೆ ಅಂದರೆ ೧೯೭೦ ರಲ್ಲಿ ನನ್ನ ಪುಸ್ತಕ "ಗ್ರಂಥಸೂಚಿ ಮತ್ತು ಪುಸ್ತಕಶಾಸ್ತ್ರ"ವು ಪ್ರಕಟವಾಗಿದೆ. ಇದರಲ್ಲಿ ಮೇಲೆ ಹೇಳಿರುವ ಮೂರು ಇಂಗ್ಲೀಷ ಪುಸ್ತಕಗಳಲ್ಲಿರುವ ವಿಷಯ ಸಾರಾಂಶವು ಬಂದಿದೆ. ಅಲ್ಲದೆ 'ಪುರವಣಿ' ಅಧ್ಯಾಯದಲ್ಲಿ ಪುಸ್ತಕ ರಚನೆಯಲ್ಲಿ ಹುಟ್ಟಬಹುದಾದ ಕಸ-ಕಳೆಯನ್ನು ಚರ್ಚಿಸಿ ಆ ಸಂಬಂಧದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ವಚನ ಗ್ರಂಥಗಳ ಪ್ರಕಟನೆಗಳಲ್ಲಿ 'ವಚನಗಳ ಅಕ್ಷರಾನುಕ್ರಮ'ಗಳನ್ನು ಪ್ರತಿಯೊಂದು ಗ್ರಂಥದಲ್ಲಿ ಕೊಟ್ಟಿರುವುದನ್ನು ಓದುಗರಿಗೆ ಅಭ್ಯಾಸಿಗರಿಗೆ ಉಪಯುಕ್ತವಲ್ಲದ ಆದರೆ 'ಗ್ರಂಥಗಾತ್ರವರ್ಧನ ತಂತ್ರ'ವು ಅಡಕವಾಗಿರುವ ಕಾರ್ಯವೆಂದು ಟೀಕಿಸಲಾಗಿದೆ. ಅಲ್ಲದೆ 'ಉತ್ತರಕ್ರಿಯೆ' ಅಧ್ಯಾಯದಲ್ಲಿ ಅವರ ಪ್ರಕಟನೆಗಳಲ್ಲಿಯ ದೋಷ—ಇವು ಅಚ್ಚಿನ ದೋಷಗಳಲ್ಲ, ಆದರೆ ಸಂಬಂಧಿಸಿದವರ ಅಲಕ್ಷ್ಯತನ ಹಾಗು ಅದಕ್ಷತೆ—ಗಳ ಕುರಿತು ವಿವರಿಸಲಾಗಿದೆ. ಈ ಗ್ರಂಥವನ್ನು ವಿಶ್ವವಿದ್ಯಾಲಯದ ಅಧಿಕಾರಗಳ ಗಮನಕ್ಕೆ ಪತ್ರದ್ವಾರಾ ತರಲಾಗಿದೆ.

## A5 ಬೋರ್ಗಲ್ಲು

ಆದರೆ ಇವೆಲ್ಲವೂ ಬೋರ್ಗಲ್ಲ ಮೇಲೆ ಮಳೆಗರೆದಂತಾಗಿವೆ. ನಂತರದ ಪ್ರಕಟನೆಗಳೂ ಯಥಾಪ್ರಕಾರ ದೋಷಯುಕ್ತವಾಗುತ್ತ ಹೊರಟಿವೆ. ಅವನ್ನು ಇಲ್ಲಿ ಉಲ್ಲೇಖಿಸುವುದು ಜ್ಞಾನಪ್ರಕಾಶನದ ನಿಮಿತ್ತ ಅವಶ್ಯವೆನಿಸಿದೆ. ಆದುದರಿಂದ ಅದನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸಲಾಗಿದೆ.

## A51 ವಚನಗಳ ವರ್ಣಾನುಕ್ರಮ

ಪ್ರತಿಯೊಂದು ವಚನದ ಆರಂಭದ ಸಾಲನ್ನು 'ವಚನಗಳ ವರ್ಣಾನುಕ್ರಮ' ಎಂದು ಕ. ವಿ. ವಿ. ಪುಸ್ತಕಗಳ ಕೊನೆಯ ಭಾಗದಲ್ಲಿ ಕೊಡಲಾಗುತ್ತದೆ. ವಾಸ್ತವಿಕವಾಗಿ ಇದು ಗ್ರಂಥಗಳಲ್ಲಿ ಪ್ರಕಟವಾಗತಕ್ಕದ್ದಲ್ಲ, ಇದು ಅಭ್ಯಾಸದ ಸಾಮಗ್ರಿಯಲ್ಲ; ಪರಿಶೋಧನೆಯ (exploratory material) ಸಾಮಗ್ರಿ. ಆದುದರಿಂದ ಯಾವ ಓದುಗನಿಗೂ ಅಭ್ಯಾಸಿಗೂ ಸಾಮಾನ್ಯ ಸಂಶೋಧಕನಿಗೂ ಇದು ಉಪಯುಕ್ತವಿಲ್ಲ. ಕ್ವಚಿತ್ತಾಗಿ ಅದೇ ಗ್ರಂಥವನ್ನು ಪುನಃ ಸಂಶೋಧಿಸುವಾಗ ಆ ಕಾರ್ಯದಲ್ಲಿ ಉಪಯುಕ್ತವೆನಿಸಬಹುದಾದ ಸಾಮಗ್ರಿ. ಇಂತಹ ಸಾಮಗ್ರಿಯು ವಿಶ್ವವಿದ್ಯಾಲಯ ಜರ್ನಲ್‌ಗಳಲ್ಲಿ ಪ್ರಕಟವಾಗುವುದು ಉಚಿತವಾದುದು ಹೊರತು ವಚನ ಗ್ರಂಥಗಳಲ್ಲಲ್ಲ. ಹೀಗೆ ಮಾಡುವಾಗ ಒಂದು ಪುಟದಲ್ಲಿ ಎರಡು ಕಾಲಂ (ಡಾ. ಎಲ್. ಬಸವರಾಜು ಅವರು 'ಅಲ್ಲಮ ವಚನ ಚಂದ್ರಿಕೆ'ಯಲ್ಲಿ ಮೂರು ಕಾಲಂ ಮಾಡಿದ್ದಾರೆ) ಮಾಡಿ—ಒಂದರಲ್ಲಿ ಹಾಗೆ ಮಾಡಲಾಗಿದೆ–ಯಾವ ಕೊರತೆಯೂ ಇಲ್ಲದಂತೆ ಮಾಡಬಹುದು. ಆದರೆ ಇದನ್ನು ಗ್ರಂಥ ಗಾತ್ರವರ್ಧನ ತಂತ್ರವನ್ನು ಬಳಸಿ ಒಂದೇ ಸಾಲನ್ನು ಮಾಡಲಾಗಿದೆ.

## A52 ಪುನರಾವೃತ್ತಿ

(೧) ಮಹಾದೇವಿಯಕ್ಕನ ವಚನಗಳು (೨) ನೀಲಮ್ಮನ ಮತ್ತು ಲಿಂಗಮ್ಮನ ವಚನಗಳು (೩) ಇಪ್ಪತ್ತೇಳು ಶಿವಶರಣೆಯರ ವಚನಗಳು (೪) ಅಮುಗೆ ರಾಯಮ್ಮನ ಮತ್ತು ಅಕ್ಕಮ್ಮನ ವಚನಗಳು ಇವು ಪ್ರತ್ಯೇಕ ಗ್ರಂಥಗಳಾಗಿ ಪ್ರಕಟವಾಗಿದ್ದರೂ ಇವನ್ನು ಸಹ ಒಳಗೊಂಡಿರುವ 'ಶಿವಶರಣೆಯರ ವಚನಗಳು (ಸಮಗ್ರ ಸಂಪುಟ)' ಪ್ರಕಟಿಸಲ್ಪಟ್ಟಿದೆ. ಇದರ ಅಗತ್ಯವೇನಿತ್ತೋ, ಉಪಯುಕ್ತತೆ ಹೇಗೋ, ಮಹತ್ವವೇನೋ ಸಂಪಾದಕರಿಗೆನೇ ಗೊತ್ತು. ಆದರೂ ಸಮಗ್ರ ಸಂಪುಟದಲ್ಲಿ ಅಕ್ಕಮ್ಮನ ವಚನಗಳು ಕೆಲವು ಪುನರಪಿ ಅದೇ ಶೀರ್ಷಿಕೆ—ಅಕ್ಕಮ್ಮನ ವಚನಗಳು—ಯಲ್ಲಿ ಪ್ರಕಟವಾಗಿರುವುದು ಸಂಪಾದಕರ ಅಲಕ್ಷ್ಯತನ ಅಪಕ್ಷತೆಗಳ ಹೆಗ್ಗುರುತಾಗಿವೆ.

(೨)

ವಚನಗಳ ಮತ್ತು ವಚನ ಗ್ರಂಥಗಳ ಪುನರಾವೃತ್ತಿಯೊಂದಿಗೆ "ವಚನಗಳ ವರ್ಣಾನುಕ್ರಮು"ವೂ ಸಹ ಪುನಃ ಮುದ್ರಿತವಾಗಬೇಕೇ? ಇವರ ಅವಶ್ಯಕತೆಯೇನು? ಇದು ಸಂಪಾದಕರ ಮೂಢತನದ ಕಾರ್ಯವಲ್ಲದೆ ಸಾರ್ವಜನಿಕ ದುಡ್ಡು ಕಾಲ ಪರಿಶ್ರಮಗಳ ಅಪವ್ಯಯ. ಇಂತಹದನ್ನು ಮಾಡುವುದು ವಿಶ್ವವಿದ್ಯಾಲಯಕ್ಕೆ ಅಗೌರವ ಹಾಗು ಕಲಂಕ. ಇದು "ಪಂಚವಾರ್ಷಿಕ ಯೋಜನೆಯ ದುಡ್ಡು ಗಟಾರದಲ್ಲಿ ಹರಿದು ಹೋಗುತ್ತದೆ" ಎಂಬ ಸಾರ್ವಜನಿಕ ಟೀಕೆಗೆ ಒಂದು ಉತ್ತಮ ನಿದರ್ಶನವಾಗಿದೆ.

## A53 ದೋಷಗಳು

ಪ್ರಸ್ತಾವನೆಯಲ್ಲಿ ಉಂಟಾಗಿರುವ ಹಾಗು ಅಲಕ್ಷತೆ ಅದಕ್ಷತೆಯ ಕುರುಹಾಗಿರುವ ಕೆಲವು ದೋಷಗಳನ್ನು ಇಲ್ಲಿ ಉದಹರಿಸಲಾಗಿದೆ. ಇವು ಮುದ್ರಣ ದೋಷಗಳೆಂದು ಸಂಪಾದಕರು ಸಮರ್ಥಿಸಿಕೊಳ್ಳಲಾರರು.—

| ಪ್ರಸ್ತಾವನೆಯ ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೭ | ೨ | ಲಿಂಗ ಲಿಂಗಸಮರಸ | ಅಂಗಲಿಂಗಸಮರಸ |
| ೮ | ೧ | ಪೃತಿಯಾಧೀನ | ಪತಿಯಾಧೀನ |
| ೧೦ | ೨೩ | ದೋಷಣೆಯಿಂದ | ದೂಷಣೆಯಿಂದ |
| | ೨೪ | ಅಕೇಳು | ಅಕೇಡು |
| ೧೧ | ೧೫ | ಅಂತರಂಗದ ಕಾಲ | ಅಂತರಂಗ ಕೀಲ |
| ೧೨ | ೧೨ | ಮಾಡುವಂಗೆ | ಮಾರುವಂಗೆ |
| ೧೪ | ೪ | ಮನಮುನಿ | ಮನುಮುನಿ |

ಇವರಂತೆಯೇ ಮುಕ್ತಿಕಂಠಾಭರಣದ ಪಠ್ಯಭಾಗದಲ್ಲಿಯ ದೋಷಗಳ ಕುರಿತು ಅನೇಕ ಉದಾಹರಣೆಗಳನ್ನು ಕೊಡಬಹುದಾದರೂ ಇದೊಂದೇ ಸಾಕಾಗುತ್ತದೆ.

| | | | |
|---|---|---|---|
| ೫೧ | ೨೮ | ವರ ಗುರಿಗಳಿಗೆ | ನರ ಗುರುಗಳಿಗೆ |

ಇದು ಸಂಪಾದನಾಕಾರ್ಯದ ಗತಿಮತಿಗಳ ಮೇಲೆ ಬೆಳಕು ಚಲ್ಲುತ್ತದೆ.

## A6 ಪಾರ್ಕಿನಸನ್

ಕರ್ನಾಟಕ ವಿಶ್ವವಿದ್ಯಾಲಯದ ಗ್ರಂಥಸಂಪಾದನಾ ವಿಭಾಗದವರು ಅವರ ಕಾರ್ಯದಲ್ಲಿಯ ವಿಭಾಗವಲ್ಲಿಯ ಲೋಪ ದೋಷಗಳನ್ನು ಎತ್ತಿಹೇಳಿ ನಾನು ಪುಸ್ತಕ ಪ್ರಕಟಿಸಿದಾಗ್ಯೂ ಅವನ್ನು ಅವರ ಗಮನಕ್ಕೆ ತಂದಾಗ್ಯೂ ಕಣ್ಣುಮುಚ್ಚಿ ಕುಳಿತುಕೊಂಡಿರುವದು ಹಾಗು ಕೂಪ ಮಂಡೂಕ ವೃತ್ತಿಯನ್ನು ತಾಳಿರುವದು, ಇಂತಹ ಮನೋವೃತ್ತಿಯು ಇವುಗಳಿಗೆ ಏನಾದರೂ ಕಾರಣ ಗಳನ್ನು ಕಂಡುಹಿಡಿಯಬಹುದೇ, ಏನಾದರೂ ಸಮರ್ಥನೆಯನ್ನು ಪಡೆಯ ಬಹುದೆ ಎಂಬ ಪ್ರಶ್ನೆ ಮೂಡುತ್ತದೆ. ಇಂತಹ ಪ್ರಶ್ನೆಗೆ ಪಾರ್ಕಿನಸನ್ (C. Northcote Parkinson) ನ ಗ್ರಂಥಗಳು ಪರಿಹಾರ ನೀಡುತ್ತವೆ. ಅವನು ತನ್ನ ಗ್ರಂಥಗಳಲ್ಲಿ ಸಾರ್ವಜನಿಕ ನಡೆವಳಿ ಮನಸ್ಸು ಇವುಗಳ ಬಗ್ಗೆ ಸಾಕಷ್ಟು ವಿವರಣೆ ನೀಡಿದ್ದಾನೆ. ಅವನು ಹೇಳಿದ ಸೂತ್ರ (Laws) ಗಳಲ್ಲಿ ಮೂರನ್ನು (1) Coefficiency of inefficiency (೨) In-laws and outlaws (3) Law of Profit ಇಲ್ಲಿ ಸೂಕ್ತವಾಗಿ ಎತ್ತಿ ಹೇಳ ಬಹುದು. ಇವುಗಳೊಂದಿಗೆ ನನಗೆ ಹೊಳೆದ Law of Kitchen Department ಎಂಬುದೊಂದನ್ನು ಸೇರಿಸಬಹುದು.

## A61 ತಮ್ಮತಮ್ಮವರು

ರಾಜಕಾರಣದ ಕ್ಷೇತ್ರದಲ್ಲಿ kitchen cabinet ಎಂಬ ವಿಚಾರವು ಅಂಗೀಕೃತವಾಗಿದೆ. ಅದರಲ್ಲಿ ತಮಗೆ ಅನುಕೂಲವಾದವರು ಸಹಮತದವರು ಬೇಕಾದವರು ಎಂಬ ಭಾವನೆಯಡಗಿದೆ; ಅಂಥವರಿಂದ ಘಟಿತವಾದ ಮಂತ್ರಿ ಮಂಡಳವಿರುತ್ತದೆ. ಇದೇ ವಿಚಾರವನ್ನು ಪ್ರಸಂಗಕ್ಕೆ ತಕ್ಕಂತೆ ಮಾರ್ಪಡಿಸಿ kitchen department ಎಂದಾಗಿ ವಿಶ್ವವಿದ್ಯಾಲಯದ ವಿದ್ವತ್ ವಿಭಾಗ ಗಳಿಗೂ ಅನ್ವಯಿಸಬಹುದಾಗಿದೆ. ಇದನ್ನು ಅನ್ವಯಿಸುವಾಗ ಪಾರ್ಕಿನಸನ್ನನು ಹೇಳಿದ In-laws and outlaws ಎಂಬುವದು ಅಂದರೆ ತಮ್ಮ ತಮ್ಮವರು ತಮ್ಮ ಸಂಬಂಧಿಕರು ಪರಿಸರದಲ್ಲಿರುವವರು ಅನುಕೂಲವಾಗುವವರು ಉಪಯೋಗವಾಗುವವರು ಅಧೀನರು ಎಂದು ಅರ್ಥವಾಗುತ್ತದೆ. ಇಂಥವರಿಂದ

ಘಟಿತವಾದ ವಿಭಾಗಸ್ತರಲ್ಲಿ ತಾವು ಮಹಾಜ್ಞಾನಿಗಳು ತಾವು ನುಡಿದುದೇ ಪ್ರಾಧಾನ್ಯ ತಾವು ಮಾಡಿದುದೇ ಶ್ರೇಷ್ಠ, ಅವರಲ್ಲಿ ದೋಷಗಳಿರುವುದಿಲ್ಲ, ಅದಕ್ಕೆ ಪ್ರತಿ ಹೇಳುವುದು ಸಾಧ್ಯವಿಲ್ಲ, ಪ್ರತಿ ಹೇಳಿದರೆ ಅದು ಗೌಣ ನಿರ್ಲಕ್ಷಿಸತಕ್ಕದ್ದು ಎಂಬ ವಿಚಾರ ಭಾವನೆಗಳು ಸಹಜವಾಗಿ ಮೂಡಿರುತ್ತವೆ. ಅವಕ್ಕೆ ಆಡಳಿತ ವಿಭಾಗದಿಂದ ಪ್ರೋತ್ಸಾಹ ಪುರಸ್ಕಾರಗಳು ದೊರಕುತ್ತವೆ. ಆದುದರಿಂದ ತಪ್ಪು ತೋರಿಸಿದಾಗ ಎಂತಹದಾದರೂ ಸುಳ್ಳು ಹೇಳಿ—ಉದಾ: ಭಾರತೀಯ ಲಿಪ್ಯಾಂತರ ಪದ್ಧತಿ ಎಂದುದು—ಸಮರ್ಥಿಸಿಕೊಳ್ಳಬಹುದು ಎಂಬ ನಂಬುಗೆ ದೃಢ ವಿಶ್ವಾಸಗಳು ಇವರಿಗೆ ಕಲ್ಪವೃಕ್ಷವಾಗುತ್ತವೆ.

## A62 ಲಾಭ

ಇಂತಹ ಕಿಚನ (Kitchen Department) ಡಿಪಾರ್ಟಮೆಂಟಿನ ಹಿನ್ನೆಲೆಯಲ್ಲಿ The Law of Profits ಎಂತು ಕಾರ್ಯವೆಸಗುತ್ತಿದೆ ಎಂಬುದು ಪರಿಶೀಲನಾರ್ಹ :— (1) ಅವರಿಗೆ ತಮ್ಮ ಸಂಬಳ ಪಡೆಯುವ ಕಾರ್ಯದೊಂದಿಗೆ ಬೇರೊಂದು ಕಾರ್ಯ ಮಾಡಹಚ್ಚಿ ಅದಕ್ಕಾಗಿ ತೃಪ್ತಿಕರವಾದ ಸಂಭಾವನೆಯನ್ನು ಕೊಡುವುದು (2) ಅದರಿಂದಾಗಿ ಪಟ್ಟಭದ್ರ ಹಿತಾಸಕ್ತಿಯನ್ನು ಹುಟ್ಟಿಸುವುದು (3) ಇದರಿಂದ ದಕ್ಷ ತಜ್ಞ ಯಥೋಚಿತ ಕಾರ್ಯಸಾಗುವುದೆಂಬ ಗ್ರಹಿಕೆಯ ಅಸ್ತಿವಾರ ಹಾಕುವುದು. ಈ ಮೂಲಕವೇ S'ūnyasampādane ಪ್ರಕಟನೆಗಳಲ್ಲಿ ಮಾಡಿರುವ ಮಾಡುತ್ತಿರುವ ಲಿಪ್ಯಾಂತರದಲ್ಲಿ ಹಾಗು ಗ್ರಂಥಸೂಚಿಯಲ್ಲಿ ಅಕ್ರಮಗಳು ತಪ್ಪುಗಳು ನಿರ್ಮಾಣವಾಗುತ್ತಿದ್ದರೂ ಅವುಗಳನ್ನು ಎತ್ತಿ ತೋರಿಸಿ ಖಂಡಿಸಿದರೂ ಇನ್ನೂ ಸಂತೃಪ್ತಿ ಭಾವನೆ ತಾಳುವುದು ನಡೆದಿದೆ. ಆದುದರಿಂದ ನನ್ನ ಈ ಮೊದಲು ಹೇಳಿದ ಗ್ರಂಥಗಳಲ್ಲಿ ಉಲ್ಲೇಖಿಸಲಾದ ಘನ ಮತ್ತು ಹೇರಳವಾದ ತಪ್ಪುಗಳು ಲಾಭದ ಸೂತ್ರವು ಇಂತು ಕಾರ್ಯವೆಸಗುತ್ತಿರುವುದಕ್ಕೆ ಉತ್ತಮ ನಿದರ್ಶನಗಳಾಗಿವೆ. ಅಲ್ಲದೆ ಉಚಿತವಲ್ಲದ ಕಾರ್ಯವನ್ನು ಹಮ್ಮಿ ಹಚ್ಚಿಸಿ ನಿಧಾನವಾಗಿ ಏನೋ ಎಂತೋ ಎಂಬ ಪರಿಯಲ್ಲಿ ತಮ್ಮ ತಮ್ಮವರಿಂದ ಕಾರ್ಯಸಾಗಿಸುವುದೂ ಲಾಭದ ಸೂತ್ರಕ್ಕೆ ಅನುಗುಣವಾಗಿರುವದು.

## A63 ಅದಕ್ಷತೆ

ಪಾರ್ಕಿನಸನ್ನನು Coefficiency of Inefficiency ಅದಕ್ಷತೆಯ ಮೌಲಿಕವನ್ನು ವಿವರಿಸುವಾಗ ಅದರ ಮೂಲ ಕಾರಣವನ್ನು inefficiency grows as the staff grows ಅಂದರೆ ಕಾರ್ಯಕರ್ತರ ಸಂಖ್ಯೆಯು ಬೆಳೆದಂತೆ ಅದಕ್ಷತೆಯು ಬೆಳೆಯುತ್ತ ಹೋಗುವುದೆಂದು ಪ್ರತಿಪಾದಿಸಿದ್ದಾನೆ. ನಾನು ಉಲ್ಲೇಖಿಸಿದ, ಇಲ್ಲಿ ಉಲ್ಲೇಖಿಸುತ್ತಿರುವ ಅದಕ್ಷತೆಯ ಕುರುಹುಗಳು ಸಂಗತಿಗಳು ಈ ಸೂತ್ರಕ್ಕೆ ಅನುಗುಣವಾಗಿ ಘಟಿಸಿರಬಹುದು. ಆದರೆ ನಾನು ಇಲ್ಲಿ ನಿರ್ಧಾರದಿಂದ ಹೇಳುವ ಅಂಶವೇನಂದರೆ inefficiency grows as criticism grows ವಿಮರ್ಶೆ ಟೀಕೆಗಳು ಬೆಳೆದಂತೆ ತಪ್ಪುಗಳು ಬೆಳೆಯುತ್ತ ಹೋಗುತ್ತವೆ. ಇದಕ್ಕೆ ನನ್ನ ಪ್ರಕಟನೆಗಳು, ವಿಶ್ವವಿದ್ಯಾಲಯಕ್ಕೆ ಬರೆದ ಪತ್ರಗಳು ಅನಂತರ ಸಂಭವಿಸಿದ, ಮೇಲೆ ವಿವರಿಸಿದ ಪರಿಣಾಮಗಳು ಹಾಗು ದೋಷಗಳು ಇದಕ್ಕೆ ಸಾಕ್ಷಿಯಾಗಿವೆ. ವಾಸ್ತವಿಕವಾಗಿ ಟೀಕೆಗಳಿಗೆ ಆಸ್ಪದ ದೊರಕದಂತೆ ಮುಂದೆ ಸಂಪಾದಕ ವರ್ಗದವರು ತಿದ್ದಿಕೊಳ್ಳಬೇಕಾಗುತ್ತದೆ. ಆದರೆ ಅವಕ್ಕೆ ಪ್ರತಿಕ್ರಿಯೆ ಎಂಬಂತೆ ಏನೋ ಮತ್ತಷ್ಟು ವಿಪುಲವಾದ ಹಾಗು ಗಹನವಾದ ತಪ್ಪುಗಳನ್ನು ಮಾಡುತ್ತ ಹೊರಟಿದ್ದಾರೆ, ಎಂಬುದು ಸ್ಪಷ್ಟವಿದೆ.

## A7 ಮುಕ್ತಿ

Kitchen Department ದ ಕಾರ್ಯಪದ್ಧತಿಯನ್ನು ಹಾಗು ಎಸಗಿದ ಕಾರ್ಯದ ಇತಿಹಾಸವನ್ನು ಪರಿಶೀಲಿಸಿದ ನಂತರ ಪ್ರಸ್ತುತ ವಿಷಯವಾದ ಮುಕ್ತಿಕಂಠಾಭರಣ ಗ್ರಂಥದ ಕಡೆಗೆ ಹೊರಳುವುದು ಕ್ರಮಪ್ರಾಪ್ತವಾಗಿದೆ. ಈ ಕುರಿತು ಮುಂದಿನ ಅಧ್ಯಾಯಗಳಲ್ಲಿ ಅದು ಎಂತಹ ಹೀನ, ಅಧಮ ಅಶ್ಲೀಲ ಕುಹಕ ದುರ್ಬುದ್ಧಿ ದುರ್ಭಾವ ಪ್ರೇರಿತ ಚೌರ್ಯ ಕೃತಕ ಗ್ರಂಥವಾಗಿದೆಯೆಂಬುದನ್ನು ಸಮಂಜಸವಾಗಿ ವಿವರಿಸಲಾಗಿದೆ, ಪ್ರತಿಪಾದಿಸಲಾಗಿದೆ. ಇದರಿಂದಾಗಿ ಅನಾಮಧೇಯ ಗ್ರಂಥಕರ್ತನು ಎಂಥವನು ಅವನ ಗುಣಶೀಲಗಳೆಂತಹವು ಎಂಬುದನ್ನು ಹೇಳಲಾಗಿದೆ. ಅವನು ತೀರ ಇತ್ತೀಚಿನವ.

ಅವನು ಬಸವ–ದ್ವೇಷಿ, ಕಾಮುಕ. ಆದುದರಿಂದಲೇ ಬಸವಣ್ಣನನ್ನು ಹೀನಾಯಮಾನವಾಗಿ ಹೇರಳವಾಗಿ ಅನುಚಿತ ದುಷ್ಟ ಶಬ್ದಗಳಿಂದ ಜರೆದಿದ್ದಾನೆ. ಅದಕ್ಕೆ ಕಾರಣವೆಂದರೆ ಬಸವಣ್ಣನವರು ಸ್ತ್ರೀಯರ ಗುಣಶೀಲ ಗೌರವಗಳನ್ನು ಕಾಪಾಡಬೇಕು; ಅವರ ಬಗ್ಗೆ ದುರಾಸೆ ದುರ್ಭಾವಗಳನ್ನು ತಾಳಬಾರದು, ದುರ್ಲಾಭ ಪಡೆಯಬಾರದು ಎಂದು ವಿಧಿಸುತ್ತಾರೆ. ಆದರೆ ಗ್ರಂಥಕರ್ತನಾದರೋ ಕಾಮುಕ, ಅಂತೆಯೆ ಸಂಭೋಗವನ್ನು ಸಮರಸ ಭಕ್ತಿ ಎಂಬಂತೆ ಧ್ವನಿಸಿದ್ದಾನೆ; ಮತ್ತು ಜಾದರ ಮಾಡಿದರೆ ದೋಷವಿಲ್ಲೆಂದು ನಿರ್ಣಯ ಹೇಳಿದ್ದಾನೆ. ಆದುದರಿಂದ ಮುಕ್ತಿಕಂಠಾಭರಣವು ವೀರಶೈವರಿಗೆ, ಪೂರ್ವದ ಪೂಜ್ಯ ಗಣ್ಯ ಶರಣರಿಗೆ ಅವಹೇಳನ ಹಾಗು ಅಪಮಾನ ಮಾಡುತ್ತದೆ.

## A71 ಸಂಪಾದಕರು

ಇಂತಹ ದುಷ್ಟ ಜಾಸಿರ್ಕಾಕ ಗ್ರಂಥವನ್ನು ಸಂಪಾದಿಸಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾಗುವುದಕ್ಕೆ ಕಾರಣರಾದುದರ ಮೇಲಿಂದ ಸಂಪಾದಕರ ಬಗ್ಗೆಯೂ ಹೇಳುವುದು ಅವಶ್ಯವೆನಿಸುತ್ತದೆ. ಗ್ರಂಥವನ್ನು ಸಂಪಾದಿಸುವ ಮೊದಲು ಅದರ ಗುಣ ಯೋಗ್ಯತೆಗಳನ್ನು ಪರಿಶೀಲಿಸಿ ವಿವೇಚಿಸಿ ನೋಡುವುದು ಸಂಪಾದಕರ ಕರ್ತವ್ಯವಾಗಿದೆ. ಆದುದರಿಂದ ಮುಕ್ತಿಕಂಠಾ-ಭರಣ ಸಂಪಾದಿಸಿದುದರ ಕಾರಣದಿಂದಾಗಿ ಅದರಲ್ಲಿಯ ದುಷ್ಟತನ ದೌರ್ಜನ್ಯಗಳನ್ನು ಸಂಪಾದಕರು ಅನುಮೋದಿಸುವವರು ಎಂಬ ಅಭಿಪ್ರಾಯ ಮೂಡುತ್ತದೆ. ಗ್ರಂಥಕಾರನಂತೆ ಸಂಪಾದಕರೂ ಬಸವ–ವಿರೋಧಿಯಾಗಿರುವರೆಂದು ಮತ್ತು ಬಸವಣ್ಣನವರ ಬಗ್ಗೆ ದುರ್ಭಾವನೆಗಳನ್ನು ಹೊಂದಿರುವರೆಂಬುದು ಸ್ಪಷ್ಟವಾಗುತ್ತದೆ; ಇದಕ್ಕೆ ಮುಕ್ತಿಕಂಠಾಭರಣವು ಒಂದು ಪ್ರತೀಕವಾಗಿದೆ ಎನ್ನಲು ಅಡ್ಡಿಯಿಲ್ಲ. ಮತ್ತು ಈ ಗ್ರಂಥದ ವಿಮರ್ಶೆಯು ಪ್ರಕಟವಾಗಹತ್ತಿ ಸಾರ್ವಜನಿಕರ ಹಾಗು ಅಧಿಕಾರಿಗಳ ಗಮನ ಸೆಳೆದಾಗ ಅವರು ನಡೆಸಿದ ಪ್ರಚಾರದ ತಂತ್ರ, ವೈಖರಿ, ಪತ್ರಿಕೆಗಳಿಗೆ ಕೊಟ್ಟ ಲೇಖ ಮೇಲಧಿಕಾರಿಗಳು ಅದರ ಪ್ರತಿಗಳ ಪ್ರಸಾರವನ್ನು ತಡೆಹಿಡಿಯುವ ನಿರ್ಣಯ ಕೈಕೊಂಡಾಗ್ಯೂ ಅದನ್ನು ಬದಲಿಸುವ ಹಾಗು ಗ್ರಂಥವು ಒಳ್ಳೆಯದು ಉತ್ತಮ

ವಾದದ್ದು ಎಂದು ಅಭಿಪ್ರಾಯ ರೂಪಿಸುವ ಪ್ರಯತ್ನ ಇವುಗಳನ್ನು ಆಲೋಚಿಸಿದಾಗ ಅವರು ಹೊಂದಿರುವ ಅಭಿಪ್ರಾಯಗಳಿಗಷ್ಟೇ ಅಲ್ಲದೆ ಮಾಡಿರುವ ಕಾರ್ಯದ ಮೂಲಕವೂ ಅವರಿಗೆ ಕಲಂಕ ಬರುತ್ತದೆ.

## A72 ಯೋಜಿತ ಕಾರ್ಯ

ಮುಕ್ತಿಕಂಠಾಭರಣದ ಪ್ರಕಟನೆಯು ಒಂದು ಪೂರ್ವಯೋಜಿತ ಕಾರ್ಯವಾಗಿ ಪೂರ್ವಸಿದ್ಧತೆಯಿಂದಲೇ ನಡೆದುದಾಗಿ ಕಂಡುಬರುತ್ತದೆ. ಈ ಸಿದ್ಧತೆಯು ೧೯೬೫ ರ ನಂತರ ಅಂದರೆ ಚನ್ನಬಸವಣ್ಣನವರ ವಚನಗಳು ಪ್ರಕಟನೆಯ ನಂತರ ಮತ್ತು ಬಸವಣ್ಣನವರ ವಚನಗಳ ಆರಂಭದ ಕಾಲ (ಅಂದರೆ ೧೯೬೮ ರ ಸುಮಾರಿನಿಂದ) ದಿಂದ ನಡೆದಿದೆ. ಆದುದರಿಂದ ಮುಕ್ತಿ-ಕಂಠಾಭರಣದಲ್ಲಿಯ ಕೃತಕ ಕಪಟ ವಚನಗಳನ್ನು ಬಸವಣ್ಣ, ಸಿದ್ಧರಾಮ, ಗಂಗಾಂಬಿಕೆ ಇವರ ವಚನ ಸಂಗ್ರಹದಲ್ಲಿ ಸೇರಿಸುವ ಮೂಲಕ ಅವುಗಳಿಗೆ ಪ್ರಮಾಣಿತತನದ ದೀಕ್ಷೆ ಕೊಟ್ಟಿದ್ದಾರೆ. ಇದರಿಂದ 'ಓತಿಕಾಟಿಗೆ ಜೇಲಿಯ ಸಾಕ್ಷಿ' ಎಂಬಂತೆ ಪರಸ್ಪರ ಪ್ರಾಮಾಣ್ಯವನ್ನು ಕಲ್ಪಿಸುವ ಯುಕ್ತಿ ಹೂಡಿದ್ದಾರೆ. ಇದು ಕುಚೋದ್ಯ. ಇಂತಹದನ್ನು ಮುಂಬರಲಿರುವ ವಚನ ಗ್ರಂಥಗಳಲ್ಲಿ ಸಹ ಸಾಧಿಸಲಿರುವರೇನೋ ? ? ?

## A73 ಪಟ್ಟಿ

ಈ ಕುಚೋದ್ಯವನ್ನು ಮರೆಮಾಚುವುದಕ್ಕಾಗಿ ಮುಕ್ತಿಕಂಠಾಭರಣದಲ್ಲಿಯ ವಚನಗಳಲ್ಲಿ ನಿಜವಾದುವು ಎಷ್ಟು ಕೃತಕವಾದುವು ಎಷ್ಟು ಎಂಬುದನ್ನು ಎತ್ತಿ ವಿವರಿಸಿ ಹೇಳಿಲ್ಲ. ಅವರು ಪ್ರಸ್ತಾವನೆಯ ೪–೫ ಪುಟಗಳಲ್ಲಿ ಹೇಳಿರುವ ವಚನಕಾರರ ಹಾಗು ಅವರ ವಚನ ಸಂಖ್ಯೆಯ ಪಟ್ಟಿಯಲ್ಲಿ ಇನ್ನೆರಡು ಕಾಲಂ ಮಾಡಿ ಪ್ರಮಾಣಿತ, ಕೃತಕ ವಚನಗಳನ್ನು ನಿರ್ದೇಶಿಸಬೇಕಿತ್ತು. ಆದರೆ ಅದನ್ನು ಬುದ್ಧಿಪೂರ್ವಕವಾಗಿ ಮಾಡದೆ ಬಿಟ್ಟಿದ್ದಾರೆ. ಏಕೆಂದರೆ ಅದರಿಂದ ಸತ್ಯಾಂಶಗಳು ಹೊರಬಿದ್ದು ಗ್ರಂಥದ ಬಗ್ಗೆ ವಸ್ತುಸ್ಥಿತಿಯು ಬೆಳಕಿಗೆ ಬರುತ್ತಿತ್ತು; ಮತ್ತು ಮಾಡಿದ ಮಾಡುತ್ತಿರುವ ದುಷ್ಕಾರ್ಯ ಬಯಲಿಗೆ ಬರುತ್ತಿತ್ತು.

## A74 ಹಸ್ತಪ್ರತಿ

ಸಂಪಾದಕರು ದೂಷಣೆಗೆ ಗುರಿಯಾಗಿರುವ ಇನ್ನೊಂದು ಅಂಶವೆಂದರೆ ಹಸ್ತಪ್ರತಿಯ ಬಗ್ಗೆ ಅವಶ್ಯವಾದುದನ್ನು ಹಾಗು ಸಂಪಾದನಾ ಕಾರ್ಯದ ಅಂಗವಾಗಿ ಹೇಳಿಯೆ ತೀರಬೇಕಾದುದನ್ನು ಹೇಳದೆ ಬುದ್ಧಿಪೂರ್ವಕವಾಗಿ ಮರೆಮಾಚಿದ್ದಾರೆ. ಸಂಪಾದನಾ ಕಾರ್ಯದಲ್ಲಿ ಆಧರಿತ ಪ್ರತಿಗಳ ಬಗ್ಗೆ ಉಲ್ಲೇಖ ಮಾಡುವುದು ಅವಶ್ಯವಷ್ಟೇ ಅಲ್ಲದೆ ಅದೊಂದು ವಾಡಿಕೆಯೂ ಆಗಿದೆ. ಇದನ್ನು ಇತರ ಸಂಪಾದಿತ ಗ್ರಂಥಗಳಿಂದ ಪರಿಶೀಲಿಸಿ ನೋಡಬಹುದು. ಮುಕ್ತಿಕಂಠಾಭರಣವು ತೀರ ಆಧುನಿಕ ಗ್ರಂಥ; ಅಂತೆಯೇ ಅದು ಬಿಳಿಯ ಕಾಗದದ ಮೇಲೆ ಬರೆಯಲ್ಪಟ್ಟಿದ್ದು; ಅಲ್ಲದೆ ಇದು ದುಷ್ಟವಾದುದು ಹಾಗು ದುರ್ಭಾವ ದುರ್ನೀತಿ ಪ್ರಚೋದಕವಾದುದು. ಆದುದರಿಂದ ಇದನ್ನು ಮರೆ ಮಾಚುವುದಕ್ಕಾಗಿ ಹಾಗು ಅದು ಪ್ರಾಚೀನ ಗ್ರಂಥವೆಂದು ಸಾಧಿಸುವುದಕ್ಕಾಗಿ ಹಸ್ತಪ್ರತಿಯ ಸಂಬಂಧದ ವಿಷಯವನ್ನು ಬುದ್ಧಿಪೂರ್ವಕವಾಗಿ ಉಲ್ಲೇಖಿಸದೆ ಬಿಡಲಾಗಿದೆ. ಮೇಲಾಗಿ ಈ ಹಸ್ತಪ್ರತಿಯನ್ನು ಬಸವಣ್ಣ ಸಿದ್ಧರಾಮರ ವಚನ ಗ್ರಂಥಗಳಲ್ಲಿ ಉಲ್ಲೇಖಿಸುವಲ್ಲಿ ಒಮ್ಮೆ 'ಮುಕ್ತಿಕಂಠಾಭರಣ'ವೆಂದು ಮತ್ತೊಮ್ಮೆ 'ಗುರುಪ್ರಶಂಸಾ ಮುಕ್ತಿಕಂಠಾಭರಣ'ವೆಂದು ಹೇಳಿ ಗೊಂದಲ ವನ್ನುಂಟು ಮಾಡಿದ್ದಾರೆ.

## A75 ಪಾಠಶುದ್ಧಿ

ಗ್ರಂಥಸಂಪಾದನಾ ಕಾರ್ಯದ ಅಂಗವಾಗಿ ವಚನಗಳ ಪಾಠಶುದ್ಧಿ ಯನ್ನೇನೂ ಮಾಡಿಲ್ಲ. ಆದುದರಿಂದ ಸಂಪಾದಕರು ದೂಷಣೆಗೆ ಗುರಿಯಾಗಿ ದ್ದಾರೆ. ಇದಕ್ಕೆ ಕಾರಣವನ್ನು "ಈ ತರದ ಆಕರಗಳು ಇದ್ದಂತೆಯೇ ಪ್ರಕಟ ವಾಗುವುದು ಅವಶ್ಯವಿದ್ದುದರಿಂದ ಹಾಗೆ ಮಾಡಲಾಗಿಲ್ಲ" ಎಂದಿದ್ದಾರೆ. ಆದರೆ ಇದೊಂದು ಕುಹಕ ಹಾಗು ಕುಂಟು ನೆವ. ಇದರಿಂದ ತಮ್ಮ ಸಂಪಾದನಾ ಕಾರ್ಯವನ್ನು ಹಗುರಾಗಿ ಮಾಡಿಕೊಂಡಿದ್ದಾರೆ; ಅಲ್ಲದೆ ಹಾಗೆ ಮಾಡಿದರೆ ಮುಕ್ತಿಕಂಠಾಭರಣದಲ್ಲಿಯ ದುರ್ಭಾವ ದೌರ್ಜನ್ಯ ದುಶ್ಶೀಲ ಹಾಗು ಕೃತ್ರಕತೆ ಕುಚೋದ್ಯತೆಗಳು ಬಯಲಿಗೆ ಬರಲು ಆಸ್ಪದವೊದಗುವುದೆಂದು ಭಯಭೀತ ರಾಗಿದ್ದಾರೆ.

## A76 ವಿಮರ್ಶೆ

ಈ ವಿಮರ್ಶೆಯಲ್ಲಿ ಮುಕ್ತಿಕಂಠಾಭರಣದ ಅಂತರಂಗ ಬಹಿರಂಗಗಳೆರಡನ್ನೂ ಒರೆದು ನೋಡಲಾಗಿದೆ. ಬಹಿರಂಗವಾದ ವಚನಗಳ ಪೈಕಟ್ಟು, ಪಾದ ರಚನೆ, ವಿರಾಮ ಚಿನ್ಹಗಳ ಬಳಕೆ ಇವುಗಳು ಖಂಡನಾಸ್ಪದವಾಗಿರುವವೆಂಬುದನ್ನು ಹೇಳಲಾಗಿದೆ. ಅದರ ಅಂತರಂಗದ ವಿಷಯವಾಗಿ ಪಾಠಶುದ್ಧಿ ಅದರಲ್ಲಿಯ ದೋಷಗಳು, ವಿಷಯ ಅದರ ನಿರೂಪಣೆ ಹಾಗು ಪ್ರತಿಪಾದನೆ, ಉದ್ದೇಶ, ಸಾಹಿತ್ಯಿಕ ಅಂಶ ಇವೆಲ್ಲವನ್ನು ವಿಚಾರದ ಒರೆಗಲ್ಲಿಗೆ ಹಚ್ಚಿ ಇದೊಂದು ಕೀಳುಪ್ರತಿಯ ದುರ್ಬುದ್ಧಿಯ ದುರ್ನೀತಿಬೋಧಕ ಪುಸ್ತಕವಾಗಿದೆ ಎಂದು ಸಿದ್ಧಮಾಡಿ ತೋರಿಸಲಾಗಿದೆ. ಆದರೂ ಅನಾಮಧೇಯ ಗ್ರಂಥಕರ್ತನು ಗೋಮುಖವ್ಯಾಘ್ರನಂತೆ ನಟಿಸಿ ಆಕ್ಷೇಪಕರವಾದುದನ್ನು ಮರೆಮಾಚುವುದಕ್ಕಾಗಿ ಅಲ್ಲಲ್ಲಿ ಬಸವಣ್ಣನವರ ಬಗೆಗೆ ಕೆಲವು ಒಳ್ಳೆಯ ಮಾತುಗಳನ್ನು, ಸಮರಸದ ಬಗ್ಗೆ ಒಪ್ಪಿಗೆಯಾಗುವ ಕೆಲವು ವಚನಗಳನ್ನು ಅಲ್ಲವೆ ಇನ್ನೂ ಹಲವು ವಿಚಾರಾಂಶಗಳನ್ನು ಸಂಕಲಿಸಿದ್ದಾನೆ. ಆದರೆ ಇವೆಲ್ಲವೂ ಗೌಣವಾಗಿ ದುರ್ವಿಷಯಗಳೇ ಮುಖ್ಯವಾಗಿ ಗುರಿಯಾಗಿ ಉದ್ದೇಶವಾಗಿ ಇವೆಯೆಂಬುದು ಸುಸ್ಪಷ್ಟವಿದೆ. ಹೀಗಿದ್ದಾಗ್ಯೂ ಇದರ ಸಂಪಾದಕರು ಪ್ರಶಂಸೆಯ ಸುರಿಮಳೆಗರಿದಿದ್ದಾರೆ; ಇದು ವೀರಶೈವ ಧರ್ಮತತ್ವಗಳ ನಿಷ್ಕರ್ಷೆಯ ದೃಷ್ಟಿಯಿಂದ ಮಹತ್ವವಾದ ಗ್ರಂಥ ಎಂದಿದ್ದಾರೆ. ಇವರ ಹೇಳಿಕೆಯು ವಾಸ್ತವಿಕವಾಗಿರದೆ 'ಹೆತ್ತವರಿಗೆ ಹೆಗ್ಗಣವೇ ಮುದ್ದು' ಎಂಬ ಗಾದೆಯ ನಿದರ್ಶನವಾಗಿದೆ. ಇದರ ನಿರಸನವನ್ನು ಮಾಡಲಾಗಿದೆ.

## A77 ಲಘುಕಾರ್ಯ

ಸಂಪಾದಕರು ಎಲ್ಲ ಬಗೆಯಿಂದಲೂ ಕರ್ತವ್ಯಚ್ಯುತರಾಗಿದ್ದಾರೆ ಮತ್ತು ಹೊಣೆಗಾರರಾಗಿದ್ದಾರೆ ಎಂಬುದನ್ನು ಕರ್ನಾಟಕ ವಿಶ್ವವಿದ್ಯಾಲಯದ ವ್ಹಾಯಿಸ-ಚಾನಸೆಲರರಿಗೆ ಬರೆದ ಪತ್ರ (ಪರಿಶಿಷ್ಟ II ನೋಡಿರಿ) ದಲ್ಲಿ ಕಾಣಿಸಲಾಗಿದೆ. ಮುಕ್ತಿಕಂಠಾಭರಣದ ಸಂಪಾದನಾ ಕಾರ್ಯವನ್ನು ಲಘುವಾಗಿ ಭಾವಿಸಿ ಅಂತೆಯೆ ಜರುಗಿಸಿದ್ದಾರೆ. ಹಾಗೆ ಮಾಡುವಾಗ ಸಂಪಾದಿಸುವವರು

ಪ್ರಕಟಿಸುವವರು ಪಠ್ಯಪುಸ್ತಕವಾಗಿಸುವವರು ನಾವೇ, ಅಲ್ಲದೆ ವರ್ಗದಲ್ಲಿ ಪಾಠ ಹೇಳುವವರು ನಾವೆ ಕಲಿಯುವವರು ನಮ್ಮ ವಿದ್ಯಾರ್ಥಿಗಳೆ ಅವರ ಪರೀಕ್ಷಕರು ನಾವೇ ಆದುದರಿಂದ ಇದ್ದಕ್ಕಿದ್ದಂತೆಯೇ ಪ್ರಕಟಿಸುವುದು ಅನುಕೂಲ ಸಿಂಧುವು ಎಂಬ ಬುದ್ಧಿ ಪ್ರೇರಿತರಾಗಿರಬೇಕು. ಹೊರತಾಗಿ ಏನಾದರೂ ಇರಲಿ ಹೇಗಾದರೂ ಇರಲಿ ಹೇಳಿಕೊಳ್ಳುವುದಕ್ಕಾಗಿ ಒಂದು ಕಾರ್ಯ, ಪ್ರಚಾರ ಪ್ರಸಿದ್ಧಿಗಳಿಗಾಗಿ ಒಂದು ಪ್ರಕಟನೆ ಎಂಬ ವಿಚಾರ ಬುದ್ಧಿಗಳು ಪ್ರೇರಕವಾದಂತೆ ಕಂಡು ಬರುತ್ತದೆ. ಅಂತೆಯೇ ಪಾರ್ಕಿನಸನ್ನನ ಎಲ್ಲ ಸೂತ್ರಗಳೂ ಇದರಲ್ಲಿ ಮೈವೆತ್ತಿವೆ. ನಂತರದಲ್ಲಿ ಹೊರಡಿಸಿದ cyclostyled ಸ್ಪಷ್ಟೀಕರಣದಿಂದ ಹಾಗು ಪತ್ರಿಕೆಗಳಲ್ಲಿ ಕೊಟ್ಟ ಲೇಖಗಳ ಮೂಲಕ ಮುಕ್ತಿಕಂಠಾಭರಣವು ಸಿದ್ಧವೀರದೇವನಿಂದ ರಚಿತವಾಯಿತು, ಅದು ಸು. ೧೭೦೦ ರಲ್ಲಿ ರಚಿತವಾದ ಪ್ರಾಚೀನ ಗ್ರಂಥ ಎಂಬುದಾಗಿ ಸುಳ್ಳು ಸಾಧಿಸುವ ಚಾಣಕ್ಯ ತಂತ್ರವಂತೂ ಯಾವ ವಿಶ್ವವಿದ್ಯಾಲಯದ ಸಂಪಾದಕರಿಗೂ ಶೋಭೆ ತರಲಾರದು.

## A8 ಸದ್ಯದ ಪರಿಸ್ಥಿತಿ

ಮುಕ್ತಿಕಂಠಾಭರಣವು ೧೯೭೧–೭೨ ವರುಷ ಎಮ್. ಎ. (ಕನ್ನಡ) ತರಗತಿಗೆ ಪಠ್ಯಪುಸ್ತಕವಾಗಿತ್ತು. ಅದು ಈ ವರ್ಷ ಇಲ್ಲ. ಅದರ ಮಾರಾಟವನ್ನು ಒಂದು ಗೊತ್ತುವಳಿಯ ಮೂಲಕ ವಿಶ್ವವಿದ್ಯಾಲಯದವರು ತಡೆಹಿಡಿದಿದ್ದಾರೆ (ಇದರ ಬಗ್ಗೆ ಅವರು ಅಧಿಕೃತ ಪ್ರಕಟನೆಯನ್ನೇನೂ ಹೊರಡಿಸಿಲ್ಲ). ಅದಕ್ಕೆ ಅದು ಅಪೂರ್ಣವಾಗಿರುವುದು ಎಂದು ಕಾರಣ ಹೇಳಿದ್ದಾರೆ. ಆ ಗೊತ್ತುವಳಿಯಲ್ಲಿ ಹಸ್ತಪ್ರತಿಯು ಅಪೂರ್ಣವಿದೆಯೆಂಬ ಭಾವನೆಯನ್ನು ಹುಟ್ಟಿಸಿ ಪೂರ್ಣವಾದ ಪ್ರತಿಗಳನ್ನು ದೊರಕಿಸುವ ಆಶಯವನ್ನು ವ್ಯಕ್ತಪಡಿಸಿ ಅದನ್ನು ಪ್ರಕಟಿಸುವ ಭರವಸೆಯನ್ನು ಕೊಟ್ಟಿದ್ದಾರೆ. ಆದರೆ ಇದರಿಂದ ಮುಕ್ತಿಕಂಠಾಭರಣ ಪ್ರಕಟನೆಯಿಂದಾದ ಹಾನಿ ಕೇಡುಗಳು ಪರಿಹಾರವಾಗಿಲ್ಲ. ಅದನ್ನು ಉಪಮಿಸಿ ಹೇಳಬೇಕಾದರೆ, ಸದ್ದುಗದ್ದಲಕ್ಕಂಜಿ ಹಾವು ಹುತ್ತನ್ನು ಸೇರಿದಂತಾಗಿದೆ, ಎನ್ನಬಹುದು. ಈಗ್ಗೆ ಒದಗಿದ ಹಾಗು ಮುಂದೊದಗಬಹುದಾದ ಕೇಡುಗಳನ್ನು ವಿವರಿಸಿ ಕರ್ನಾಟಕ ವಿಶ್ವವಿದ್ಯಾಲಯದ ವ್ಹಾಯಿಸ-ಚಾನಸೆಲರರಿಗೆ ಪತ್ರ ಬರೆಯಲಾಗಿದೆ (ಪರಿಶಿಷ್ಟ III).

## A9 ರದ್ದು

ಒಂದು ಪುಸ್ತಕ ಪ್ರಕಟನೆಯಿಂದಾದ ಕೇಡನ್ನು ನಿವಾರಿಸಬೇಕಾದರೆ ಅದು ರದ್ದಾಗಬೇಕಾಗುತ್ತದೆ; ಅದರ ಪ್ರತಿಗಳೆಲ್ಲವೂ ನಾಶವಾಗಬೇಕಾಗುತ್ತದೆ; ಅದು ಹೇಳ ಹೆಸರಿಲ್ಲದಂತಾಗಬೇಕಾಗುತ್ತದೆ; ಅದರ ಇತಿಶ್ರೀಯಾಗಬೇಕಾಗುತ್ತದೆ; ಅದು ನೋಡಲು ದೊರಕದಂತಾಗಬೇಕಾಗುತ್ತದೆ. ಆದರೂ ವಾಸ್ತವಿಕವಾಗಿ ರದ್ದಾದ ಪುಸ್ತಕಗಳ ಪ್ರತಿಗಳು ವ್ಯಕ್ತಿಗಳ ಬಳಿಯಲ್ಲಿ ಉಳಿದೇ ಉಳಿಯುತ್ತವೆ. ಅದರಲ್ಲಿಯ ಸಂಗತಿಗಳು ಅಜ್ಞಾತವಾಗಿ ಹರಡುತ್ತವೆ. ಆದುದರಿಂದ ಆ ಪುಸ್ತಕವನ್ನು ರದ್ದುಗೊಳಿಸುವುದರ ಜೊತೆಗೆ ಅದು ಎಂತಹ ಅಪಾಯಕಾರಿಯಾಗಿದೆ ಎಂಬುದನ್ನು ವಿಮರ್ಶಾತ್ಮಕ ಗ್ರಂಥಗಳ ಮೂಲಕ ಪ್ರಚುರಪಡಿಸಬೇಕಾಗುತ್ತದೆ; ಮತ್ತು ಅದರ ವಿಷಪರಿಣಾಮವನ್ನು ತಡೆಗಟ್ಟಬೇಕಾಗುತ್ತದೆ. ಅದೇ ನನ್ನ ಪ್ರಸ್ತುತ ಗ್ರಂಥದ ಕಾರ್ಯ ಹಾಗು ಉದ್ದೇಶಗಳಾಗಿವೆ.

## A91 ದಾಖಲೆ

ಗ್ರಂಥವು ರದ್ದಾದರೂ ಅದರ ದಾಖಲೆಗಳು ಉಳಿಯುವವು. ವಾಙ್ಮಯ (Bibiography) ದರ್ಶಕಗಳಲ್ಲಿ ಅದರ ಉಲ್ಲೇಖಗಳು ಬರುವವು; ಅದರ ಬಗ್ಗೆ ಸಂಕ್ಷಿಪ್ತ ಟಿಪ್ಪಣಿಗಳು ಇರುವವು; ಈ ಟಿಪ್ಪಣಿಗಳು ಸಂಪಾದಕರು ಪ್ರಸ್ತಾವನೆಯಲ್ಲಿ ಹೇಳಿರುವುದನ್ನೇ ಎತ್ತಿ ಹೇಳುವವು. ಇದು Indian National Bibliography ಯಲ್ಲಿ ಉಲ್ಲೇಖವಾಗುವುದು. ಅದರಂತೆಯೆ ಮೈಸೂರು ವಿಶ್ವವಿದ್ಯಾಲಯದವರು ತಯಾರಿಸುತ್ತಿರುವ ಕನ್ನಡ ಪುಸ್ತಕಗಳ ದರ್ಶಕಗಳಲ್ಲಿಯೂ ಉಲ್ಲೇಖವಾಗುವುದು. ಹೀಗೆಯೆ ಮತ್ತಾವುದಾದರೂ ದರ್ಶಕ—ಉದಾ : ರಾಜ್ಯ ವಾಙ್ಮಯದರ್ಶಕ, ವೀರಶೈವ ವಾಙ್ಮಯದರ್ಶಕ-ಗಳು ಪ್ರಕಟವಾದರೆ ಅವುಗಳಲ್ಲಿಯೂ ಸಹ ಮುಕ್ತಿಕಂಠಾಭರಣದ ಉಲ್ಲೇಖವು ಬರುವುದು. ಒಂದು ವೇಳೆ ಈ ಪುಸ್ತಕವು ರದ್ದಾ (proscribe) ದರೂ ಅದರ ಬಗ್ಗೆ ದಾಖಲೆಯು ರದ್ದಾದ ಪುಸ್ತಕಗಳ ದರ್ಶಕ—ಉದಾ : (1) Bibliography of Prohibited Books (3 vols.), (2) The Banned Books of England and other

countries by Alec Craig (1962)–ಗಳಲ್ಲಿ ಬರುವುದು. ಇದುವರೆಗೆ ರದ್ದಾದ ಗ್ರಂಥಗಳು ಕಥೆ ಕಾದಂಬರಿ ಕಾವ್ಯ ಮುಂತಾದ ಕಾಲ್ಪನಿಕ ಸಾಹಿತ್ಯ ಗ್ರಂಥಗಳಾಗಿವೆ. ಆದರೆ ಧರ್ಮತತ್ವಗಳಿಗೆ ಸಂಬಂಧಿಸಿದುದು ಇದೊಂದೇ ಎನ್ನಬಹುದು. ಈ ದೃಷ್ಟಿಯಿಂದ ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನೆ ಯಾದ ಮುಕ್ತಿಕಂಠಾಭರಣವು ಒಂದು ಮೈಲುಗಲ್ಲಾಗಿದೆ.

## A92 ಇತಿಹಾಸ

ಪುಸ್ತಕವನ್ನು ತಡೆಹಿಡಿಯುವ ರದ್ದುಪಡಿಸುವ ಬಗ್ಗೆ ಇತ್ತೀಚೆಗೆ ಕನ್ನಡ ನಾಡಿನಲ್ಲಿ ನಡೆದ ಆಂದೋಲನವನ್ನು ಸಂಕ್ಷೇಪದಲ್ಲಿ ಹೇಳುವುದು ಸೂಕ್ತವಾಗಿದೆ. — (1) ಮದ್ರಾಸ ವಿಶ್ವವಿದ್ಯಾಲಯದವರು ಪ್ರಕಟಿಸಿದ ಧರಣಿ ಪಂಡಿತನ ಬಿಜ್ಜಳರಾಯ ಚರಿತೆ ಪುಸ್ತಕವು ಅದರಲ್ಲಿ ವೀರಶೈವರಿಗೆ ಹಾನಿಕಾರಕ ಆಕ್ಷೇಪಕಾರಕ ಹಾಗು ಐತಿಹಾಸಿಕವಲ್ಲದ ಸಂಗತಿಗಳು ಬರುತ್ತಿದ್ದುದರಿಂದ ಆ ಪ್ರಕಟನೆಯ ಪ್ರತಿಭಟನಾರ್ಥವಾಗಿ ಆಂದೋಲನವು ನಡೆದುದರಿಂದ ಆ ಪುಸ್ತಕದ ಪ್ರಸಾರವನ್ನು ತಡೆಹಿಡಿಯಲಾಯಿತು (2) ವೆಂಕಟೇಶ ಮಾಸ್ತಿಯವರು ಬರೆದ ಐತಿಹಾಸಿಕ ಕಾದಂಬರಿ 'ಚನ್ನಬಸವ ನಾಯಕ' ಗ್ರಂಥವನ್ನು ಭಾರತೀಯ ಸಾಹಿತ್ಯ ಅಕ್ಯಾಡೆಮಿಯವರು ಭಾರತದ ಇತರ ಭಾಷೆಗಳಲ್ಲಿ ಭಾಷಾಂತರಿಸಿ ಪ್ರಕಟಿಸಲಿಕ್ಕೆ ಆರಿಸಿಕೊಂಡರು. ಇದಕ್ಕೆ ಸಹ ಐತಿಹಾಸಿಕ ಕಾರಣಗಳಿಂದ ಮತ್ತು ವೀರಶೈವ ಆಚಾರ ವಿಚಾರ ಸಂಸ್ಕೃತಿ ಹಾಗು ವೀರಶೈವ ಐತಿಹಾಸಿಕ ಪುರುಷರ ಅವಹೇಳನ ಕಾರಣದಿಂದ ಪ್ರತಿಭಟನೆ ವ್ಯಕ್ತವಾಗಲು ಅದರ ಭಾಷಾಂತರವನ್ನು ಕೈಬಿಡಬೇಕಾಯಿತು. (೩) ಕರ್ನಾಟಕ ವಿಶ್ವವಿದ್ಯಾಲಯದವರು S'unyasampādane ಸಂಪುಟ ೧ರಲ್ಲಿ ಮುಕ್ತಾಯಕ್ಕನ ಬಗ್ಗೆ ದೋಷಭರಿತವಾಗಿ ಹೇಳಿದುದನ್ನು ಅವರ ಗಮನಕ್ಕೆ ತರಲು ಆ ಸಂಗತಿಯನ್ನು ತೊಡೆದು ಹಾಕುವುದಕ್ಕಾಗಿ ಅಚ್ಚಾದ ಭಾಗದ ಮೇಲೆ ಬೇರೆ ಕಾಗದದ ತುಂಡನ್ನು ಹಚ್ಚಲಾಯಿತು. ಆನಂತರ ಉಗ್ರ ಟೀಕೆಗೆ ಆಂದೋಲನಕ್ಕೆ ಗುರಿಯಾದದು 'ಮುಕ್ತಿಕಂಠಾಭರಣ'. ಇದು ರದ್ದಾಗಲಿ. ಶಾಂತಂ ಪಾಪಂ.

———

# B ಗ್ರಂಥ

## B1 ಶಪಿತ ಗ್ರಂಥ

ಮುಕ್ತಿಕಂಠಾಭರಣ ಗ್ರಂಥದ ವಿಷಯದಲ್ಲಿ ಏನೊಂದನ್ನು ನುಡಿಯುವ ಮೊದಲು ಸಾಂಪ್ರದಾಯಕ್ಕೆ ವಿರುದ್ಧವಾಗಿಯಾದರೂ ಶಾಪದ ನುಡಿಯಾಡ ಬೇಕಾಗಿದೆ. ಪ್ರಾರಂಭದಲ್ಲಿ ಆಶೀ (ಮಂಗಳ) ರ್ವಚನವನ್ನು ನುಡಿಯುವುದನ್ನು ಬಿಟ್ಟು ಶಾಪದ ನುಡಿಯನ್ನು ಆಡುವುದು ವಿಚಿತ್ರವಾಗಿ ಕಾಣಬಹುದು. ಆದರೆ ಗತ್ಯಂತರವಿಲ್ಲ. ಏಕೆಂದರೆ ನಾನು ಇದರಲ್ಲಿ ಸ್ವತಂತ್ರವಾಗಿ ಏನೂ ಹೇಳುವುದಿಲ್ಲ. ಮೂಲ ಅನಾಮಧೇಯ ಗ್ರಂಥಕರ್ತನು ಬಯಸಿದುದನ್ನೇ ಆಡಿದುದನ್ನೇ ನಾನೂ ಕೂಡ ನುಡಿಯುತ್ತೇನೆ. ಗ್ರಂಥಕರ್ತನು ಎರಡನೆಯದಾದ ಗುರು-ಪಾದೋದಕ ಪ್ರಶಂಸೆಯ ಪ್ರಕರಣದ ೪೯ನೆಯ ವಚನದಲ್ಲಿಯೇ ಶಾಪವನ್ನು ನುಡಿದಿದ್ದಾನೆ. ಈ ಗ್ರಂಥವು 'ತಮ್ಮ ರಾಣಿಯರಿಗರುಹಿದ ರಹಸ್ಯಬೋಧೆ' ಎಂದು ಉಲ್ಲೇಖಿಸಿ ಇದನ್ನು 'ಪಾತಕರಿಗರುಹಿದೆಯಾದಡೆ [ ರಹಸ್ಯವನ್ನು ಬಯಲು ಮಾಡಿದರೆ] ಸಕಲ ನಾಯಕನರಕಂಗಳಾಗದಿರ್ಪವೆ' ಎಂದಿದ್ದಾನೆ. ಈ ಶಾಪವನ್ನು ನಿರ್ಲಕ್ಷಿಸಿ, ಅವನು ಹಾಕಿದ ನಿಷೇಧವನ್ನು ಕಡೆಗಣಿಸಿ ಈ ಹೇಯವಾದ ಅಶ್ಲೀಲವಾದ ಅಧಮವಾದ ಪುಸ್ತಕವನ್ನು ಕರ್ನಾಟಕ ವಿಶ್ವವಿದ್ಯಾಲಯದ ಸಂಪಾದಕರು ಪ್ರಕಟಿಸಿದ್ದಾರೆ; ಮತ್ತು ಈ ಮೂಲಕ ಅಕಾರ್ಯವನ್ನು ದುಷ್ಕಾರ್ಯವನ್ನು ಮಾಡಿದ್ದಾರೆ. ನಾವು ಹೇಳುವ ಶಾಪವು ಈ ಗ್ರಂಥಕರ್ತನ ಶಾಪದಂತೆ ಉಗ್ರವಾದುದಿಲ್ಲ. ಅದು ಸಮಂಜಸವಾದುದು ಆಗಿದೆ. ಏನೆಂದರೆ ಈ ಮುಕ್ತಿಕಂಠಾಭರಣ ಗ್ರಂಥದ ಪ್ರತಿಗಳು ನಾಶಪಡಿಸಲ್ಪಡ ಬೇಕು ಮತ್ತು ಅದು ಹೇಳಹೆಸರಿಲ್ಲದಂತಾಗಬೇಕು. ಈ ಮುಂದೆ ಇದರ ಹೆಸರನ್ನು ಯಾರೂ ಎತ್ತಕೂಡದು. ಇದರಲ್ಲಿಯ ವಿಷಯ ಸಂಗತಿಗಳನ್ನು ಯಾರೂ ಉಲ್ಲೇಖಿಸಕೂಡದು. ಇದೇ ಶಾಪ. ಇದರಿಂದ ಅನಾಮಧೇಯ ಗ್ರಂಥಕರ್ತನ ಶಾಪವು ಸಫಲವಾಗುವುದು; ಮತ್ತು ಸಂಪಾದಕರಿಗೆ ಹಾಗು ವಿಶ್ವವಿದ್ಯಾಲಯಕ್ಕೆ ತಗಲಬಹುದಾದ ಕಲಂಕವೂ ದೂರಾಗುವುದು.

## B2 ಸಂಕಲನ

ಮುಕ್ತಿಕಂಠಾಭರಣವು ಒಂದು ಸ್ವತಂತ್ರ ಕೃತಿಯಾಗಿರದೆ ಒಂದು ಸಂಕಲನ ಗ್ರಂಥವಾಗಿದೆ. ಅದರ ಪ್ರಸ್ತಾವನೆ ಭಾಗದಲ್ಲಿ (ಪುಟ ೪) ಸಂಪಾದಕರು ಹೇಳಿದ ಪ್ರಕಾರ ೪೨ ವಚನಕಾರರಿಂದ ರಚಿಸಿದ ವಚನಗಳನ್ನು ಆಯ್ದುಕೊಂಡು ಅವರಲ್ಲಿ ಉದ್ಧರಿಸಲಾಗಿದೆ. ಇದು ಹೇಳಿಕೆಯ ಮಾತು ಹಾಗು ತೋರುವ ಕೃತಿ. ಆದರೆ ಇದರ ವಸ್ತುಸ್ಥಿತಿಯನ್ನು ನೈಜತೆಯನ್ನು ಸತ್ಯತೆಯನ್ನು ಪರಿಶೀಲಿಸಿ ನೋಡಿದಾಗ ಇದರಲ್ಲಿ ಸ್ವಲ್ಪವೇ ವಚನಗಳು ಆ ಆ ಶರಣರಿಂದ ರಚಿತವಾದ ನಿಜವಾದ ವಚನಗಳು ಇದ್ದರೆ ಅನೇಕ ವಚನಗಳು ಕೃತಕ (fabricated) ಇವೆ. ಇದು ನಿಜವಾದ ವಚನಗಳ ಸಂಕಲನವೆಂದು ಭಾವನೆಯನ್ನು ಹುಟ್ಟಿಸುವುದಕ್ಕಾಗಿ ಬಸವಣ್ಣನವರ ೧೦೦ ವಚನಗಳಲ್ಲಿ ೭೭ ನಿಜವಾದವು (ಮಿಕ್ಕ ೨೩ ಕೃತಕವಾದವು) ಗಳನ್ನು ಸೇರಿಸಲಾಗಿದೆ. ಆದರೆ ಇನ್ನಿತರ ಶರಣರ ವಚನಗಳು ವಿಶೇಷವಾಗಿ ಕೃತಕವಿವೆ. ಈ ಮುಂದೆ ಕೊಟ್ಟಿರುವ ಪಟ್ಟಿಯು ಇದನ್ನು ಸ್ಫುಟಗೊಳಿಸುವುದು.

## B3 ಕಂಚುಕ

ಕೃತಕತೆಯನ್ನು ಮರೆಮಾಚುವುದಕ್ಕಾಗಿ ಹಾಗು ನೈಜತೆಯನ್ನು ಪ್ರದರ್ಶಿಸುವುದಕ್ಕಾಗಿ ಪರಸ್ಪರ ಸಂವಾದದ ಕಂಚುಕವನ್ನು ಗ್ರಂಥಕರ್ತನು ಮುಕ್ತಿಕಂಠಾಭರಣಕ್ಕೆ ತೊಡಿಸಿದ್ದಾನೆ. ಇವರಲ್ಲಿ ಉಕ್ತರಾದ ವಚನಕಾರರು ಒಂದೆಡೆಗೆ ಕೂಡಿಕೊಂಡು ಚರ್ಚೆ ವಾದ ವಿವಾದಗಳನ್ನು ನಡೆಸಿದಂತೆ ತೋರ್ಪಡಿಸಿದ್ದಾನೆ. ಹದಿನೈದನೆಯ ಶತಮಾನದ ಕೃತಿಯಾದ ಶೂನ್ಯ ಸಂಪಾದನೆ ಗ್ರಂಥದ ಪ್ರತಿಯೊಂದು ಪ್ರಕರಣದಲ್ಲಿ ಆಯಾಯ ವಚನಕಾರರು ಸಮ್ಮಿಲಿತರಾಗಿ ಚರ್ಚಿಸಿದರು ಬೋಧಿಸಿದರು ಎಂಬಂತಹ ಒಂದು ಪಡಿಯಚ್ಚಿನಲ್ಲಿ ನಿರೂಪಿತವಾಗಿದೆ. ಇದರಲ್ಲಿ ನಿರೂಪಿತವಾದ ಪರಸ್ಪರ ವಚನಗಳಿಗೆ ಬೆಸುಗೆಯನ್ನು ಹಾಕುವುದಕ್ಕಾಗಿ ಗೂಳೂರು ಸಿದ್ಧವೀರಣ್ಣೊಡೆಯ ಮುಂತಾದ ಸಂಪಾದಕರು ಗದ್ಯದ ಕೊಂಡೆಯನ್ನು ತಳುಕು ಹಾಕಿದ್ದಾರೆ. ಇದಕ್ಕೆ ಪ್ರತಿಯಾಗಿ ಮುಕ್ತಿಕಂಠಾಭರಣದಲ್ಲಿ ವಚನದಲ್ಲಿಯೇ ಅನ್ಯರ ಹೆಸರನ್ನು ಸೇರಿಸಿ

(೩೧೫ ವಚನಗಳಲ್ಲಿ ಹೀಗೆ ಮಾಡಿದುದು ಕಂಡುಬರುವುದು) ಸಂಬೋಧನೆಯ ಕಲ್ಪನೆಯನ್ನು ಹುಟ್ಟಿಸಿದ್ದಾನೆ. ಆದರೆ ಇಂತಹ ಕಂಚುಕದಿಂದ ಯಾರೂ ಮೋಸಹೋಗಲಾರರು.

## B4 ಕೃತ್ರಿಮತೆ

ಮುಕ್ತಿಕಂಠಾಭರಣ ಗ್ರಂಥದ ಕರ್ತೃ (ಸಂಕಲನಕಾರ)ವು ವಚನಗಳ ನಡುವೆ ಪರಸ್ಪರ ಸಂಭಾಷಣೆಯ ಸ್ವರೂಪವನ್ನು ಕಲ್ಪಿಸುವುದಕ್ಕಾಗಿ ಗದ್ಯದ ಕೊಂಡಿ—ಸಂವಾದ ಸ್ವರೂಪವಾಗಿ ಸಂಕಲಿಸಿದ ಈ ಗ್ರಂಥದಲ್ಲಿ ೭೭೬ ವಚನಗಳಿದ್ದರೆ ಅವುಗಳ ನಡುವೆ ಕೇವಲ ೩೩ ಗದ್ಯದ ಕೊಂಡಿಗಳಿವೆ; ಇವುಗಳಲ್ಲಿ ೧೭ ಕೊಂಡಿಗಳು ಕಾಲ್ಪನಿಕವಾದ ಚನ್ನಬಸವಣ್ಣನ ಪ್ರಾಣವಿಯೋಗದ ಪ್ರಸಂಗದಲ್ಲಿ ಉಕ್ತವಾದವು ಆಗಿವೆ—ಗಳನ್ನು ಬಳಸುವುದಕ್ಕಿಂತ ಹೆಚ್ಚಾಗಿ ವಚನಗಳಲ್ಲಿಯೇ ಸಂಬೋಧಿತ ಶರಣರ ಹೆಸರುಗಳನ್ನು ಸೇರಿಸಿದ್ದಾನೆ. ಆದುದರಿಂದ ಈ ಕ್ರಮವು ಸ್ಪಷ್ಟವಾಗಿ ಕೃತಕತೆಯನ್ನು ಕೃತ್ರಿಮತೆಯನ್ನು ಸುಲಭವಾಗಿ ವ್ಯಕ್ತಪಡಿಸುತ್ತದೆ. ಇಂತಹ ವಚನಗಳ ಸಂಖ್ಯೆ ೩೧೫ ಇದೆ; ಮತ್ತು ಇದೇ ಸಂಗತಿಯು ಮುಕ್ತಿಕಂಠಾಭರಣವು ಪ್ರಮಾಣಿತ ವಿಶ್ವಸನೀಯ ಗ್ರಂಥವಾಗಲಾರದೆಂಬುದನ್ನು ನಿದರ್ಶಿಸುತ್ತದೆ. ಮುಕ್ತಿಕಂಠಾಭರಣದ ಸಂಪಾದಕರು ಇದನ್ನು ಆಲೋಚಿಸಿದಂತಿಲ್ಲ. ಪ್ರಕಾಶನಕ್ಕೆ ಏನೋ ಒಂದು ಹೊಸ ಗ್ರಂಥವು ದೊರಕಿತು ಎಂಬ ಸಂತೃಪ್ತಭಾವನೆಯಲ್ಲಿಯೆ ಕಾರ್ಯವೆಸಗಿದ್ದಾರೆ.

## B5 ಚೋರಕೃತಿ

ಹೀಗಿರುವುದರಿಂದ ಮುಕ್ತಿಕಂಠಾಭರಣವು ಒಂದು ಚೋರ ಕೃತಿಯಾಗಿದೆ. ಸಾಮಾನ್ಯವಾಗಿ ಅನ್ಯರ ಬರಹವನ್ನು ಎತ್ತಿಕೊಂಡು ತನ್ನ ಹೆಸರಿನಲ್ಲಿ—ಅಂದರೆ ತಾನೇ ಬರೆಯಲಾದುದು ಎಂಬಂತೆ - ಪ್ರಕಟಿಸಿದರೆ ಅದು ಕೃತಿಚೌರ್ಯವೆನಿಸುತ್ತದೆ. ಆದರೆ ಮುಕ್ತಿಕಂಠಾಭರಣದ ವಿಷಯದಲ್ಲಿ ಗ್ರಂಥಕರ್ತನು ಅನೇಕ ವಚನಗಳನ್ನು ತಾನೇ ರಚಿಸಿ ಅವುಗಳಿಗೆ ಹನ್ನೆರಡನೆಯ ಶತಮಾನದ ಹಾಗು ಬಸವಣ್ಣನವರ ಬಳಿಯಲ್ಲಿರುವ ಪ್ರಮುಖ ಶರಣರ ವಚನಾಂಕಿತವನ್ನು ಅಂಟಿಸಿ ಅವುಗಳು ಆ ಆ ಶರಣರಿಂದಲೇ ರಚಿತವಾದು

ವೆಂದು ತೋರ್ಪಡಿಸಿದ್ದಾನೆ. ಈ ರೀತಿಯಾಗಿ ವಾಙ್ಮಯ ನಿರ್ಮಾಣ ಹಾಗು ಪ್ರಸಿದ್ಧಿ ಕಾರ್ಯಗಳಿಗೆ ಅಪಕಾರ ಹಾಗು ಅಪಚಾರವೆಸಗಿದ್ದಾನೆ.

## B6 ಸ್ಪಷ್ಟತೆ

ಮುಕ್ತಿಕಂಠಾಭರಣವು ಚೋರಕೃತಿಯೆಂಬುದು ಸ್ವಯಂ ಸ್ಪಷ್ಟವಿದೆ. ಅದನ್ನು ಒಂದು ಸಾರೆ ಓದಿದ ಯಾರಿಗಾದರೂ ಹಾಗೆ ಹೊಳೆಯುವದು. ಇದರ ಕುರಿತು ಸುಸ್ಪಷ್ಟವಿರುವ ಅಂಶಗಳೆಂದರೆ—(1) ಅನೇಕ ವಚನಗಳು ಸಂಬೋಧನಾಪರವಾಗಿವೆ. ಇದನ್ನು ಕೂಲಂಕಷವಾಗಿ ನಡೆಸಿದ ಪ್ರಥಮ ಪರಿಶೀಲನೆಯಲ್ಲಿ ಮುಕ್ತಿಕಂಠಾಭರಣ ಗ್ರಂಥದಲ್ಲಿ ಒಟ್ಟು ೭೬ ವಚನಗಳು ಇದ್ದರೆ ಅವರಲ್ಲಿ ಸಂಬೋಧನಾಪರವಾಗಿರುವ ವಚನಗಳು ೩೧೫ ಇವೆ ಎಂಬುದು ಕಂಡುಬರುವುದು. ಅಂದರೆ ಇಂತಹವು ಸುಮಾರು ೧೦೦ಕ್ಕೆ ೪೩ರಷ್ಟು ಇವೆ ಎಂದಂತಾಯಿತು; (2) ಎರಡನೆಯದೆಂದರೆ ವೀರಶೈವ ಶರಣೆಯರಲ್ಲದವರ ಕೆಲವು ವಚನಗಳು ಉಲ್ಲೇಖವಾಗಿರುವದು.

## B7 ಸಂಬೋಧನೆ

ವಚನಗಳು ಸಂಬೋಧನಾಪರವಾಗಿರುವುದೇ ಅವು ಕೃತಕಗಳೆಂದು ನಿಷ್ಕರ್ಷಿಸಲು ಒಂದು ಸೂಕ್ತ ಆಧಾರವಾಗಿದೆ. ಏಕೆಂದರೆ ವೀರಶೈವ ಶರಣರು ತಾವು ಆಚಾರ್ಯರೆಂದು ಪ್ರಾಚಾರ್ಯರೆಂದು ಭಾವಿಸಿ ಅನ್ಯರನ್ನು ಬೋಧಿಸುವ ಗೊಡವೆಗೆ ಹೋಗಿಲ್ಲ. ಶರಣರ ನಿಜವಾದ ಎಲ್ಲ ವಚನಗಳೂ ಆತ್ಮಸಂಬೋಧನಾಪರವಾಗಿವೆ. ಅವುಗಳಲ್ಲಿ ಆತ್ಮನಿವೇದನೆಯು ಉಕ್ಕಿ ಹರಿಯುತ್ತದೆ. ಆತ್ಮನಿವೇದನೆಯು ನವವಿಧ ಭಕ್ತಿಗಳಲ್ಲಿ ಒಂದು ಪ್ರಕಾರವಾಗಿದೆ. ಆದುದರಿಂದ ಪರಸಂಬೋಧನೆಯು ಕೃತಕತೆಯ ಲಕ್ಷಣವಾಗಿದೆ ಎಂದು ಪ್ರಮಾಣಪೂರ್ವಕವಾಗಿ ಹೇಳಬಹುದು.

## B8 ಶರಣೆಯರು

ವೀರಶೈವ ವಾಙ್ಮಯ ಸಂಶೋಧನೆ ಹಾಗು ಪ್ರಕಟನೆಗಳಲ್ಲಿ ಕಂಡು ಬಾರದಂತಹ ನಾಲ್ವರು (ವೀರಶೈವ ?) ಶರಣೆಯರ ಹೆಸರು ಮುಕ್ತಿಕಂಠಾಭರಣದಲ್ಲಿ ಉಲ್ಲೇಖವಾಗಿವೆ. ಅವರ ವಚನಗಳನ್ನು ಹೇಳಲಾಗಿದೆ. ಅದೂ ಸಹ

ಒಂದು ವಿಚಿತ್ರ ಪರಿಸ್ಥಿತಿಯಲ್ಲಿ, ಅಸತ್ಯ ಘಟನೆಯಲ್ಲಿ, ಈ ಅಸತ್ಯ ಘಟನೆ ನಡೆದುದೆಂಬಂತೆ ಉಸುರಿದುದು ಚನ್ನಬಸವಣ್ಣನ ಸಂಬಂಧದಲ್ಲಿ. ಹೇಗಂದರೆ—ಪ್ರಭುದೇವರು ಬಸವಣ್ಣನನ್ನು ಚನ್ನಬಸವಣ್ಣನ ಸಮ್ಮುಖದಲ್ಲಿಯೆ ಜರೆದರೆಂಬ ಸಂಗತಿಯನ್ನು ಕಲ್ಪಿಸಿ ವಚನ IV ೧೦೫-೧೧೬ ಗಳನ್ನು ರಚಿಸಲಾಗಿದೆ. ಆದುದರಿಂದ "ಗುರುನಿಂದೆಗೆ ಪ್ರಾಣವಿಯೋಗವೆ ಪ್ರಾಯಶ್ಚಿತ್ತ" (ವ IV ೧೧೬) ಎಂದು ಬಗೆದು ಚನ್ನಬಸವಣ್ಣನವರು ತಮ್ಮ ಪ್ರಾಣವನ್ನು ತ್ಯಜಿಸುತ್ತಾರೆ. ಈ ಪ್ರಸಂಗದಲ್ಲಿ ಪ್ರಭುದೇವರು ಬಸವಣ್ಣ ಸಿದ್ಧರಾಮ ನೀಲಮ್ಮ ಗಂಗಾಂಬಿಕೆ ಅಕ್ಕನಾಗಮ್ಮ ಇವರು ಪ್ರಲಾಪಿಸಿದರೆಂಬುವ ವಚನಗಳನ್ನು ಹೇಳಲಾಗಿದೆ. ಅವರೊಂದಿಗೆ "ರೇವಣಸಿದ್ದೇಶ್ವರನ ಧರ್ಮಪತ್ನಿಯರಾದ ಮುನ್ನೂರು ರಾಜಕುಮಾರಿಯರ" ಪೈಕಿ (1) ವೇದಕಂಚುಕೀ (2) ಸೌಂದರಿದೇವಿ (3) ಆಗಮ ಮೋಹಿನಿ (4) ಶಾಂಭವಿ ಇವರು ಪ್ರಲಾಪಿಸಿದ ವಚನಗಳು ಬಂದಿವೆ. ಈ ಹೆಸರುಗಳೇ—ಇತರ ಶರಣೆಯರ ಹೆಸರುಗಳೊಂದಿಗೆ ತುಲನೆ ಮಾಡಿ ನೋಡಿದಾಗ—ಇವರು ವೀರಶೈವ ಶರಣೆಯರಲ್ಲವೆಂಬುದು ನಿರ್ಧಾರ ವಾಗುತ್ತದೆ. ಈ ವಚನಗಳ ಪೂರ್ವದ ಗದ್ಯದಲ್ಲಿ "ಆ ಸಮಯದಲ್ಲಿ ರೇವಣ-ಸಿದ್ಧೇಶ್ವರನ ಧರ್ಮಪತ್ನಿಯರಾದ ಮುನ್ನೂರು ರಾಜಕುಮಾರಿಯರು ಈ ವಾರ್ತೆಯಂ ಕೇಳಿ ತ್ರಿಪುರಾಂತಕನ ಕೆರೆಯ ಕಾರ್ಯವಂ ಬಿಟ್ಟು ಬಂದು ಶೋಕಿಸುವ ವಚನ" ಎಂಬ ಶೀರಿಕೆ ಇದೆ. ಈ ವಚನಕಾರ್ತಿಯರ ಹಾಗು ಅವರ ವಚನಗಳ ಬಗ್ಗೆ ಕುತೂಹಲದಿಂದ ಪರಿಶೀಲಿಸಿದಾಗ, ಇವರ ಉಲ್ಲೇಖವು ಕರ್ನಾಟಕ ವಿಶ್ವವಿದ್ಯಾಲಯದವರು ಪ್ರಕಟಿಸಿದ ಶಿವಶರಣೆಯರ ವಚನಗಳ ಸಮಗ್ರ ಸಂಪುಟದಲ್ಲಿ ಇಲ್ಲವೆ ಡಾ. ಆರ್. ನರಸಿಂಹಾಚಾರ ಅವರ ಕರ್ನಾಟಕ ಕವಿಚರಿತೆ ಸಂಪುಟಗಳಲ್ಲಿ ದೊರಕುವುದಿಲ್ಲ. ಆದುದರಿಂದ ಈ ವಚನಗಳು ಸ್ವಕಪೋಲಕಲ್ಪಿತವೆಂಬುದಕ್ಕೆ ಸಂಶಯವಿಲ್ಲ.

## B9 ಕೃತಕತೆ, ಶರಣರ ವಚನ

ಮುಕ್ತಿಕಂಠಾಭರಣದ ಸಂಪಾದಕರು ಹೇಳಿರುವಂತೆ ಬಗೆದಂತೆ ಇದು ಸಂಪೂರ್ಣವಾಗಿ ಸಂಕಲನ ಗ್ರಂಥವಾಗಿದ್ದರೆ ಇದರಲ್ಲಿರುವ ವಚನಗಳೆಲ್ಲವೂ

ಸಂಬಂಧಿಸಿದ ಉಲ್ಲೇಖಿತ ಶರಣರ ಪ್ರಮಾಣಿತ ವಚನಗಳ ಸಂಗ್ರಹ ಗ್ರಂಥಗಳಲ್ಲಿ ಬಂದಿರಲೇ ಬೇಕಾಗುತ್ತದೆ. ಏಕೆಂದರೆ ಇದು ಮೂಲ(Basic)ಭೂತ ಗ್ರಂಥವಾಗಿರದೆ (derived) ಉದ್ಭೂತ ಗ್ರಂಥವಾಗಿರುತ್ತದೆ. ಆದುದರಿಂದ ಈ ಸಂಬಂಧದಲ್ಲಿ ಮುಕ್ತಿಕಂಠಾಭರಣದಲ್ಲಿರುವ ವಚನಗಳು ಪ್ರಮಾಣಿತ ವಚನ ಸಂಗ್ರಹ ಗ್ರಂಥಗಳಲ್ಲಿ ಕಂಡುಬರುವವೇ ದೊರಕುವವೇ ಎಂಬುದು ಆಲೋಚ-ನೀಯವಾಗಿದೆ. ಈ ದಿಶೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದವರು ಪ್ರಮಾಣಿತವೆನಿಸಬಹುದಾದ ಈ ವಚನ ಸಂಗ್ರಹ ಗ್ರಂಥಗಳನ್ನು ಪ್ರಕಟಿಸಿದ್ದಾರೆ.— (1) ಬಸವಣ್ಣನವರ ವಚನ (2) ಚನ್ನಬಸವಣ್ಣನವರ ವಚನ (3) ಸಿದ್ಧ-ರಾಮೇಶ್ವರನ ವಚನ (4) ನೀಲಮ್ಮ (5) ಗಂಗಾಂಬಿಕೆ (6) ಅಕ್ಕನಾಗಮ್ಮ ಇವರ ವಚನ. ಇವುಗಳ ಪ್ರಾಮಾಣ್ಯವನ್ನು ಮುಕ್ತಿಕಂಠಾಭರಣದ ಸಂಪಾದಕರು ಪ್ರಶ್ನಿಸಲಾರರೆಂಬ ನನ್ನ ತಿಳಿವಳಿಕೆ. ಏಕೆಂದರೆ ಅವುಗಳ ಸಂಪಾದಕರು ಸಹ ಅವರೇ ಆಗಿದ್ದಾರೆ. ಇವುಗಳೊಂದಿಗೆ ಡಾ. ಎಲ್. ಬಸವರಾಜು ಅವರು ಪ್ರಕಟಿಸಿದ "ಅಲ್ಲಮ ವಚನ ಚಂದ್ರಿಕೆ"ಯು ಪ್ರಾಮಾಣ್ಯ ಗ್ರಂಥಗಳ ಮಾಲಿಕೆಯಲ್ಲಿ ಸೇರುವಂತಹದಾಗಿದೆ. ಇವುಗಳೊಂದಿಗೆ (ಪ್ರಥಮ ಪರಿಶೀಲನೆಯಲ್ಲಿ ಕಾಣಬರುವ) ಈ ಅಂಶಗಳು ಹೊರಬರುವವು.—

| ವಚನಕಾರರು | ಮುಕ್ತಿಕಂಠಾ-ಭರಣದಲ್ಲಿಯ ವಚನಗಳ ಸಂಖ್ಯೆ | ಪ್ರಮಾಣಿತ ಗ್ರಂಥ | ಅದರಲ್ಲಿ ದೊರಕುವ ವಚನಗಳ ಸಂಖ್ಯೆ |
|---|---|---|---|
| ೧. ಪ್ರಭುದೇವ | ೨೬೫ | ಅಲ್ಲಮ ವಚನ ಚಂದ್ರಿಕೆ | ೩೦ |
| ೨. ಬಸವಣ್ಣನವರು | ೧೦೦ | ಕ. ವಿ. ವಿ. ಪ್ರಕಟನೆ ಬಸವಣ್ಣನವರ ವಚನಗಳು | ೯೬ ಇದರಲ್ಲಿ ಕೊಟ್ಟಿರುವ ಹೆಚ್ಚಿನ ವಚನಗಳಲ್ಲಿ ೧೯ವಚನಗಳುಮುಕ್ತಿಕಂಠಾಭರಣದಿಂದ ತೆಗೆದುಕೊಂಡವು ಆಗಿವೆ.ಇದರ ಬಗ್ಗೆ ಪೀಠಿಕೆಯಲ್ಲಿ ಉಲ್ಲೇಖವಿದೆ. ಇದರಿಂದ ವಿಶ್ವಸನೀಯ ವಚನಗಳು ೭೭ ಮಾತ್ರ ಎಂದು ಸಿದ್ಧವಾಗುವುದು. |

| | | | | |
|---|---|---|---|---|
| ೩. | ಚನ್ನಬಸವಣ್ಣನವರು | ೮೨ | ಚನ್ನಬಸವಣ್ಣನವರ ವಚನಗಳು ೧೪ | |
| ೪. | ಸಿದ್ಧರಾಮೇಶ್ವರ | ೭೧ | ಸಿದ್ಧರಾಮೇಶ್ವರನ ವಚನಗಳು ೫೪ | ಇದರಲ್ಲಿ ಕೊಟ್ಟಿರುವ ಹೆಚ್ಚಿನ ವಚನಗಳಲ್ಲಿ ೧೧ ಮುಕ್ತಿ ಕಂಠಾಭರಣದಲ್ಲಿಯವು ಆಗಿವೆ. ಇದರ ಬಗ್ಗೆ ಪ್ರಸ್ತಾವನೆಯಲ್ಲಿ ಉಲ್ಲೇಖವು ಸ್ಪಷ್ಟವಾಗಿ ಕಂಡುಬರುವುದಿಲ್ಲ. ಇದರಿಂದ ವಿಶ್ವಸನೀಯ ವಚನಗಳು ೪೩ ಮಾತ್ರ ಎಂದು ಸಿದ್ಧವಾಗುವುದು. |
| ೫. | ಮಡಿವಾಳ ಮಾಚಿದೇವ | ೧೧೦ | ಮಡಿವಾಳ ಮಾಚಿದೇವನ ವಚನಗಳು ಸಂ.: ಫ. ಗು. ಹಳಕಟ್ಟಿ (೧೯೩೯) | * |

* ಈ ಕುರಿತು ಹಳಕಟ್ಟಿಯವರು "ಮಡಿವಾಳ ಮಾಚಿದೇವನ ವಚನಗಳುಳ್ಳ ಗ್ರಂಥವು ನಮಗೆ ಇನ್ನೂ ಉಪಲಬ್ಧವಿಲ್ಲ. ಆದರೆ ಅವು ಅನೇಕ ವಚನ ಸಂಗ್ರಹ ಗ್ರಂಥಗಳಲ್ಲಿ ಉಪಲಬ್ಧವಿರುತ್ತವೆ. ಅವುಗಳನ್ನು ನಾವು ಆಯ್ದು ಒತ್ತಟ್ಟಿಗೆ ಸೇರಿಸಿ ವಿಷಯಾನುಸಾರವಾಗಿ ಹೊಂದಿಸಿ ಈ ಗ್ರಂಥವನ್ನು ರಚಿಸಿರುತ್ತೇವೆ" ಎಂದಿದ್ದಾರೆ. ಈ ಗ್ರಂಥದಲ್ಲಿ ೧೧೦ ವಚನಗಳಿದ್ದರೂ ಇದರಲ್ಲಿಯ ಒಂದು ವಚನವಾದರೂ ಹಳಕಟ್ಟಿಯವರ ವಚನಸಂಗ್ರಹದಲ್ಲಿ ಕಂಡುಬರುವುದಿಲ್ಲ. ಇದರಿಂದ ಹಳಕಟ್ಟಿಯವರಿಗೆ ಮುಕ್ತಿಕಂಠಾಭರಣ ಗ್ರಂಥವು ಲಭಿಸಿಲ್ಲ; ಒಂದು ವೇಳೆ ಲಭಿಸಿದ್ದರೆ ಅವರೂ ಸಹ ಬಸವನಾಳರಂತೆ ಅದು ವಿಶ್ವಸನೀಯವಲ್ಲವೆಂದು ಗ್ರಹಿಸಿ ಅದರಲ್ಲಿಯ ವಚನಗಳನ್ನು ಎತ್ತಿಕೊಂಡಿಲ್ಲ.

## B91 ಶರಣೆಯರ ವಚನ

ಇನ್ನು ಶರಣೆಯರಾದ (1) ನೀಲಾಂಬಿಕೆ (2) ಅಕ್ಕನಾ(ಗಾಯಿ)ಗಮ್ಮ (3) ಗಂಗಾಂಬಿಕೆ ಇವರ ವಚನಗಳ ಬಗ್ಗೆ ಆಲೋಚಿಸುವಾ. ನೀಲಮ್ಮನ

ವಚನಗಳು ಮುಕ್ತಿಕಂಠಾಭರಣದಲ್ಲಿ ಒಂಬತ್ತು—ಆದರೆ ಸಂಪಾದಕರು ಪುಟ ೫ರಲ್ಲಿ ಎಂಟು ಇವೆ ಎಂದಿದ್ದಾರೆ—ಇವೆ. ಆದರೆ ಇವು ಯಾವವೂ ಕರ್ನಾಟಕ ವಿಶ್ವವಿದ್ಯಾಲಯದವರು ಪ್ರಕಟಿಸಿದ ಶಿವಶರಣೆಯರ ವಚನಗಳು (ಸಮಗ್ರ ಸಂಪುಟ) ಗ್ರಂಥದಲ್ಲಿ–ಇವರಲ್ಲಿ ನೀಲಮ್ಮನ ವಚನಗಳು ೧೫೫ ಇವೆ—ದೊರಕು ವುದಿಲ್ಲ. ಅಕ್ಕನಾಗಾ(ಮ್ಮ)ಯಿಯ ವಚನಗಳು ಮುಕ್ತಿಕಂಠಾಭರಣದಲ್ಲಿ ಎಂಟು ಇವೆ. ಇವುಗಳೂ ಸಹ ಶಿವಶರಣೆಯರ ವಚನಗಳು ಈ ಗ್ರಂಥದಲ್ಲಿ—ಇವರಲ್ಲಿ ಅಕ್ಕನಾಗಮ್ಮನ ವಚನಗಳು ೧೨ ಇವೆ—ದೊರಕುವುದಿಲ್ಲ. ಇನ್ನು ಗಂಗಾಂಬಿಕೆಯ ವಚನಗಳು ಮುಕ್ತಿಕಂಠಾಭರಣದಲ್ಲಿ ಆರು ಇವೆ. ಇದರಲ್ಲಿಯ ಐದು ವಚನಗಳು — ಇವು ಚನ್ನಬಸವಣ್ಣನ ಪ್ರಾಣವಿಯೋಗ ಪ್ರಸಂಗದಲ್ಲಿ ನುಡಿದವು ಆಗಿವೆ ಹಾಗು ಅವು ಒಂದೆಡೆಗೆ ಬಂದಿವೆ—ಶಿವಶರಣೆಯರ ವಚನ ಸಂಪುಟದಲ್ಲಿ ಕಂಡುಬರುತ್ತವೆ. ಇದರಿಂದ ಹೊಳೆಯುವದೇನಂದರೆ—ಬಸವಣ್ಣ ನವರ ವಚನಗಳ ಗ್ರಂಥದಲ್ಲಿ ಹೇಳಿರುವಂತೆ ಇಲ್ಲಿ ಮುಕ್ತಿಕಂಠಾಭರಣದಿಂದ ವಚನಗಳನ್ನು ಎತ್ತಿಕೊಂಡು ಸೇರಿಸಲಾಗಿದೆ ಎಂದು ಹೇಳಿರದಿದ್ದರೂ—ಚನ್ನ-ಬಸವಣ್ಣನ ಪ್ರಾಣವಿಯೋಗ ಸಂಬಂಧದಲ್ಲಿ ಪ್ರಲಾಪಿಸಿದ ಗಂಗಾಂಬಿಕೆಯ ವಚನಗಳು ಮುಕ್ತಿಕಂಠಾಭರಣ ಗ್ರಂಥದಿಂದಲೇ ಎತ್ತಿಕೊಂಡುವಾಗಿವೆ. ಈ ವಚನಗಳು ಏಕತ್ರವಾಗಿ(೨೦೦ ರಿಂದ ೨೦೪) ರುವುದರಿಂದ ಇವುಗಳನ್ನು ಸುಲಭವಾಗಿ ಎತ್ತಿಕೊಳ್ಳಲಾಗಿದೆ. ಆದರೆ ಗಂಗಾಂಬಿಕೆಯ ಅಂಕಿತವಿರುವ ೪೪ನೆಯ ವಚನವು ಕಣ್ಣುತಪ್ಪಿ ಉಳಿದುಹೋಗಿದೆ. ಪ್ರಮಾಣಿತ ಗ್ರಂಥಗಳಲ್ಲಿ ಕಂಡುಬಾರದ ನೀಲಮ್ಮನ (ಕೆಲವು) ಹಾಗು ಅಕ್ಕನಾಗಮ್ಮನ (ಬಹುತರ) ವಚನಗಳು ಚನ್ನಬಸವಣ್ಣನ ಪ್ರಾಣವಿಯೋಗ ಪ್ರಸಂಗದಲ್ಲಿ ಪ್ರಲಾಪಿಸಿದವು ಆಗಿವೆ. ಇದೆಲ್ಲ ಪರಿಶೀಲನೆಯಿಂದ ಮುಕ್ತಿಕಂಠಾಭರಣದಲ್ಲಿಯ ಈ ಶರಣೆಯರ ವಚನಗಳು ನಿಜವಾದವು ಹಾಗು ಪ್ರಮಾಣಿತವಾದವು ಅಲ್ಲ ಎಂಬುದು ನಿರ್ಧಾರ ವಾಗುತ್ತದೆ.

## B92 ಅಸಹಜತೆ

ಚೋರಕೃತಿಯೆಂದು ಹಾಗು ಅಪ್ರಾಮಾಣಿಕ (spurious) ವೆಂದು ಹೇಳಲು ಬಹುತರ ವಚನಗಳು ಸಂಶೋಧನಾಪರವಾಗಿರುವುದು ಒಂದು

ಆಧಾರವಾಗಿದೆ ಎಂದು ಈ ಮೊದಲು ಹೇಳಿದ್ದುದನ್ನು ಇಲ್ಲಿ ವಿವರವಾಗಿ ಪರಿಶೀಲಿಸೋಣ. ಮುಕ್ತಿಕಂಠಾಭರಣದಲ್ಲಿರುವ ಪ್ರಭುದೇವರ ೨೬೫ ವಚನಗಳ ಪೈಕಿ ೩೦ ವಚನಗಳು ಮಾತ್ರ ಪ್ರಭುದೇವರ ಏಕಮಾತ್ರ ವಚನಸಂಗ್ರಹ ಗ್ರಂಥವಾದ ಡಾ. ಎಲ್. ಬಸವರಾಜು ಅವರ "ಅಲ್ಲಮ ವಚನ ಚಂದ್ರಿಕೆ" ಯಲ್ಲಿ ಕಂಡುಬರುತ್ತವೆ. ಆದರೆ ಈ ೩೦ ವಚನಗಳಲ್ಲಿ ಒಂದು ಕೂಡಾ ಸಂಬೋಧನಾಪರವಾಗಿಲ್ಲ. ಇದು ಗಣನೀಯವಾಗಿದೆ.

## B93 ಬಸವಣ್ಣನವರ ವಚನಗಳು

ಮುಕ್ತಿಕಂಠಾಭರಣದಲ್ಲಿ ಬಂದಿರುವ ಬಸವಣ್ಣನವರ ೧೦೦ ವಚನಗಳ ಪೈಕಿ ೯೬ ವಚನಗಳು ಕರ್ನಾಟಕ ವಿಶ್ವವಿದ್ಯಾಲಯದವರು ಪ್ರಕಟಿಸಿದ ಬಸವಣ್ಣನವರ ವಚನ ಸಂಗ್ರಹ (ಇದು ೧೭೪ ಆಕರಗಳಿಂದ ಸಿದ್ಧವಾಗಿದೆ) ಗ್ರಂಥದಲ್ಲಿ ದೊರಕುವವು. ಇವುಗಳ ಪೈಕಿ ೭೭ ವಚನಗಳು ಷಟ್‌ಸ್ಥಲದ ವಚನಗಳಲ್ಲಿ ಇದ್ದರೆ ಉಳಿದ ೧೯ ವಚನಗಳು ಹೆಚ್ಚಿನ ವಚನಗಳಲ್ಲಿ ಸೇರ್ಪಡೆಯಾಗಿವೆ. ಮತ್ತು ಈ ೧೯ ವಚನಗಳು ಮುಕ್ತಿಕಂಠಾಭರಣದಿಂದ ಎತ್ತಿಕೊಂಡವು ಆಗಿವೆ ಎಂದು ಸಂಪಾದಕರು ಪೀಠಿಕೆಯಲ್ಲಿ ಹೇಳಿದ್ದಾರೆ. ಈ ಸಂಬಂಧದಲ್ಲಿ ಮಹತ್ವದ್ದೇನಂದರೆ ಷಟ್‌ಸ್ಥಲದಲ್ಲಿಯ ೭೭ ವಚನಗಳೊಳ್ಳಂದರಲ್ಲಿಯೂ ಪರಸಂಬೋಧನೆಯು ಇಲ್ಲ. ಆದರೆ ಹೆಚ್ಚಾಗಿ ಸೇರಿಸಿರುವ ೧೯ ವಚನಗಳಲ್ಲಿ ೯ ವಚನಗಳು ಸಂಬೋಧನಾಪರವಾಗಿವೆ. ಇವುಗಳಲ್ಲಿ ೫ ವಚನಗಳು ಪ್ರಭುದೇವರಿಗೆ ಸಂಬೋಧಿತವಾಗಿದ್ದರೆ, ೨ ಮಡಿವಾಳನಿಗೆ, ೧ ಚನ್ನಬಸವಣ್ಣನಿಗೆ, ೧ ಸಿದ್ಧರಾಮನಿಗೆ ಸಂಬೋಧಿತವಾಗಿವೆ. ಆದುದರಿಂದ ಸಂಬೋಧನಾಪರವಾಗಿರುವ ವಚನಗಳು ಆ ಆ ವಚನಕಾರರಿಂದ ರಚಿತವಾದವು ಆಗಿರದೆ ಕೃತಕವಾಗಿವೆ ಎಂಬ ಅನುಮಾನಕ್ಕೆ ನಿರ್ಧಾರದ ಕೋಟಿಯನ್ನು ಒದಗಿಸುತ್ತವೆ. ಇದೂ ಅಲ್ಲದೆ ಈ ಕೃತಕ ೧೯ ವಚನಗಳಲ್ಲಿಯೇ ಆಕ್ಷೇಪಣೀಯವಾದ ಹೇಳಿಕೆಗಳು ಬಂದಿವೆ.

## B94 ಚನ್ನಬಸವಣ್ಣನವರ ವಚನಗಳು

ಮುಕ್ತಿಕಂಠಾಭರಣ ಗ್ರಂಥದಲ್ಲಿ ೮೪ ವಚನಗಳು ಚನ್ನಬಸವಣ್ಣನವು ಇದ್ದರೆ ಇವರಲ್ಲಿಯ ಕೇವಲ ಹದಿನಾಲ್ಕು ವಚನಗಳು ಕರ್ನಾಟಕ ವಿಶ್ವವಿದ್ಯಾ

ಲಯದ ಪ್ರಕಟಣೆ (ಇದು ೮೦ ಆಕರಗಳಿಂದ ಸಿದ್ಧವಾಗಿದೆ) "ಚನ್ನಬಸವಣ್ಣನವರ ವಚನ" ಸಂಗ್ರಹ ಗ್ರಂಥದಲ್ಲಿ ಕಂಡುಬರುವವು; ಮತ್ತು ಈ ಹದಿನಾಲ್ಕು ವಚನಗಳಲ್ಲಿ ಒಂದೂ ಸಹ ಸಂಬೋಧನಾಪರವಾಗಿಲ್ಲ. ಈ ೧೪ರ ಹೊರತಾಗಿರುವ ೩೬ ವಚನಗಳಲ್ಲಿ ಅನ್ಯರಿಗೆ—೯ ಮಡಿವಾಳ ಮಾಚಿದೇವನಿಗೆ, ೧೩ ಸಿದ್ಧರಾಮನಿಗೆ, ೧೨ ಪ್ರಭುದೇವರಿಗೆ, ೧ ಸೊಡ್ಡಳ ಬಾಚರಸನಿಗೆ, ೧ ಕಿನ್ನರನಿಗೆ ಹೀಗೆ—ಸಂಬೋಧನೆ ಇದೆ.

## B95 ಸಿದ್ಧರಾಮನ ವಚನಗಳು

ಮುಕ್ತಿಕಂಠಾಭರಣದಲ್ಲಿ ಸಿದ್ಧರಾಮನ ಅಂಕಿತವುಳ್ಳ ೭೧ ವಚನಗಳು ಇವೆ. ಆದರೆ ಇವುಗಳಲ್ಲಿಯ ೫೪ ವಚನಗಳು ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನೆ (ಇದು ೮೩ ಆಕರಗಳಿಂದ ಸಿದ್ಧವಾಗಿದೆ) ಸಿದ್ಧರಾಮೇಶ್ವರನ ವಚನಗಳ ಸಂಗ್ರಹದಲ್ಲಿ ಕಂಡುಬರುತ್ತವೆ; ಮತ್ತು ಇವುಗಳ ಪೈಕಿ ೧೧ ವಚನಗಳು ಹೆಚ್ಚಿನ ವಚನಗಳ ಮಾಲಿಕೆಯಲ್ಲಿ ಇವೆ. ಈ ಹನ್ನೊಂದರಲ್ಲಿಯ ೪ ವಚನಗಳು ಪ್ರಭುದೇವರಿಗೆ ಸಂಬೋಧಿತವಾದವು ಆಗಿವೆ. ಎರಡು ವಚನಗಳು (೪೫ಸಿ ೧೯೨ಮು ಮತ್ತು ೪೬೭ಸಿ/೪೦೦ ಮು) ಮೂಲದಲ್ಲಿ ಸಂಬೋಧನಾಪರವಿಲ್ಲದಿದ್ದರೂ ಮುಕ್ತಿಕಂಠಾಭರಣದಲ್ಲಿ ಸಂಬೋಧನಾಪರವಾಗಿ ಹೇಳಲಾಗಿದೆ.

## B96 ಪ್ರಭುದೇವರ ವಚನಗಳು

ಮುಕ್ತಿಕಂಠಾಭರಣದಲ್ಲಿ ವಚನಗಳು ಸಂಬೋಧನಾಪರವಾಗಿರುವುದರ ಕುರಿತು ಪ್ರಭುದೇವರ ವಚನಗಳನ್ನು ಪರಿಶೀಲಿಸಿದಾಗ ಇನ್ನೂ ಹೆಚ್ಚಿನ ನಿದರ್ಶನಗಳು ದೊರಕುವವು. ಮುಕ್ತಿಕಂಠಾಭರಣದಲ್ಲಿ ೨೬೫ ವಚನಗಳು ಪ್ರಭುದೇವರವು ಆಗಿವೆ. ಇವುಗಳಲ್ಲಿಯ ೧೮೭ ವಚನಗಳು ಸಂಬೋಧನಾಪರವಾಗಿದ್ದು ಅದರಂತೆ ಶರಣರ ಹೆಸರುಗಳು ಉಲ್ಲೇಖವಾಗಿವೆ.—೯೧ ವಚನಗಳು ಸಿದ್ಧರಾಮನನ್ನು ಕುರಿತು, ೨೬ ಬಸವಣ್ಣನನ್ನು ಕುರಿತು (ಇವುಗಳಲ್ಲಿ ೧೨ ವಚನಗಳು ೧೦೫–೧೧೬ ಬಸವಣ್ಣನನ್ನು ಜರೆದವುಗಳಾಗಿವೆ), ೩೪ ಚನ್ನಬಸವಣ್ಣನನ್ನು ಕುರಿತು, ೨೬ ಮಡಿವಾಳ ಮಾಚಿದೇವನನ್ನು ಕುರಿತು, ಉಳಿದ ೧೦ ವಚನಗಳು ಇತರರನ್ನು ಕುರಿತು ಸಂಬೋಧಿತವಾಗಿವೆ. ಪ್ರಭುದೇವರ ವಚನಗಳು ಈ ರೀತಿ

ಯಾಗಿರುವುದು ಕೃತಕವಾಗಿವೆಯೆಂಬುದು ನಿರ್ಧಾರವಾಗುವುದು; ಏಕೆಂದರೆ ಅಲ್ಲಮ ವಚನ ಚಂದ್ರಿಕೆಯಲ್ಲಿ ದೊರಕುವ ಅಂದರೆ ಪ್ರಮಾಣಿತವಾಗಿರುವ ವಚನಗಳಲ್ಲೊಂದರಲ್ಲಿಯೂ ಅನ್ಯರ ಸಂಬೋಧನೆ ಇಲ್ಲ.

## B97 ವೇಷ

ಮುಕ್ತಿಕಂಠಾಭರಣದಲ್ಲಿ ಬಂದಿರುವ ಹನ್ನೆರಡನೆಯ ಶತಮಾನದಲ್ಲಿ ಪ್ರಸಿದ್ಧಿ ಹೊಂದಿದ ಶರಣರ ವಚನಗಳ ಅಂಕಿತವನ್ನು ಹೊಂದಿರುವ ವಚನಗಳನ್ನು ವಿಶ್ವಸನೀಯವಾದ ಹಾಗು ಪ್ರಮಾಣಿತ ವಚನಸಂಗ್ರಹ ಗ್ರಂಥಗಳಲ್ಲಿ ದೊರಕುವ ಆ ಆ ಶರಣರ ವಚನಗಳೊಂದಿಗೆ ತುಲನೆ ಮಾಡಿ ನೋಡಿದಾಗ ನಿಜವಾದ ವಚನಗಳ ಬಗ್ಗೆ ಈ ಅಂಶವು—ವಿಶ್ವಸನೀಯದ ಇಳಿತರವು ಈ ರೀತಿಯಾಗಿ—ಹೊರಬೀಳುವುದು : ಬಸವಣ್ಣನವರ ವಚನಗಳು ೧೦೦ ರಲ್ಲಿ ೭೭, ಸಿದ್ಧರಾಮನವು ೭೧ ರಲ್ಲಿ ೪೩, ಚನ್ನಬಸವಣ್ಣನವು ೮೨ ರಲ್ಲಿ ೧೪, ಪ್ರಭುದೇವರವು ೨೬೫ ರಲ್ಲಿ ೩೦, ಮಡಿವಾಳ ಮಾಚಿದೇವನವು ೧೧೦ ರಲ್ಲಿ ಒಂದೂ ಇಲ್ಲ. ಇದರಿಂದ ಕೃತಕತೆಗೆ ಒಂದು ನೈಜತೆಯ ವೇಷವನ್ನು—ಬಸವಣ್ಣನವರ ನಿಜವಾದ ವಚನಗಳನ್ನು ಬಹ್ವಂಶದಲ್ಲಿ ೭೭% ಹೇಳುವುದರ ಮೂಲಕ—ತೊಡಿಸಿ ಮುಕ್ತಿಕಂಠಾಭರಣ ಗ್ರಂಥವು ಒಂದು ನಿಜವಾದ genuine ಕೃತಿ ಎಂದು ಭಾಸವಾಗುವಂತೆ ಮಾಡಲಾಗಿದೆ; ಮತ್ತು ಈ ಮೂಲಕ ಬಸವಣ್ಣನವರನ್ನು ಹೀನಾಯಮಾನವಾಗಿ ಜರೆದಿರುವ ವಚನಗಳು ನಿಜವಾದುವು ಹಾಗು ವಿಶ್ವಸನೀಯವಾದುವು ಎಂಬ ಕಲ್ಪನೆ ಮೂಡಿಸಲಾಗಿದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಅಲ್ಲದೆ, ಮುಕ್ತಿಕಂಠಾಭರಣದಲ್ಲಿ ಹಳಗನ್ನಡದ ಱ ೞ ಅಕ್ಷರಗಳನ್ನು ಬಳಸಲಾಗಿದೆ. ೧೨ನೆಯ ಶತಮಾನದ ಪ್ರಮುಖ ಶರಣರ ವಚನಾಂಕಿತಗಳನ್ನು ಕೃತ್ರಿಮವಾಗಿ ಸೇರಿಸಿದಂತೆ ಅನಾಮಧೇಯ ಆಧುನಿಕ ಗ್ರಂಥಕರ್ತನು ತೋರಿಕೆಗಾಗಿ ಈ ಹಳಗನ್ನಡ ಅಕ್ಷರಗಳನ್ನು ತಾನೇ ಬರೆದಿರುವನೋ ಇಲ್ಲವೆ ಸಂಪಾದಕರು ಹೊಸಗನ್ನಡದ ರ ಳ ಅಕ್ಷರಗಳ ಸ್ಥಾನದಲ್ಲಿ ಹಳಗನ್ನಡದ ಱ ೞ ಅಕ್ಷರಗಳನ್ನು ಹಾಕಿದ್ದಾರೆಯೋ ತಿಳಿಯದು.

## B98 ಎಚ್ಚರಿಕೆ

ಮುಕ್ತಿಕಂಠಾಭರಣ ಗ್ರಂಥದ ಕೂಲಂಕಷ ಪರಿಶೀಲನೆಯಲ್ಲಿ ಅದರಲ್ಲಿಯ ವಚನಗಳು ಸಂಬೋಧನಾಪರವಾಗಿರುವುದು ಕೃತಕತೆಯ ಲಕ್ಷಣವಾಗಿದೆ ಯೆಂದು ನನಗೆ ಹೊಳೆದುದನ್ನು ಪ್ರಮಾಣಿಸಿಕೊಳ್ಳುವುದಕ್ಕಾಗಿ ಇತರ ವಚನ ಗ್ರಂಥಗಳನ್ನು ಸಂಶೋಧಿಸಲಾಯಿತು. ಇಂತಹ ಸಂಶೋಧನೆಯಲ್ಲಿ "ಅಲ್ಲಮ ವಚನ ಚಂದ್ರಿಕೆಯಲ್ಲಿ" ಡಾ. ಎಲ್. ಬಸವರಾಜು ಅವರು ಹೇಳಿದುದು— "ಶೂನ್ಯಸಂಪಾದನೆಯ ವಚನಗಳ ಬಗ್ಗೆ ಮತ್ತು ಶೂನ್ಯ ಸಂಪಾದನೆಯಿಂದ ವಚನಗಳನ್ನು ಸಂಗ್ರಹಿಸಿರುವಂತೆ ಕಂಡುಬರುವ ಇತರ ವಚನ ಸಂಕಲನ ಗ್ರಂಥಗಳಲ್ಲಿನ ವಚನಗಳ ಬಗ್ಗೆ ಒಂದು ಎಚ್ಚರಿಕೆ ವಹಿಸಬೇಕು. ಅವುಗಳಲ್ಲೀ ನಾದರೂ ಸಂಭಾಷಣೆಗೆ ಹೊಂದಿಕೊಳ್ಳುವ ಸಂಬೋಧನೆಗಳೂ ಆ ಸಂಭಾಷಣೆಯ ವಿಷಯವಾದ ಶರಣರ ಹೆಸರುಗಳೂ ಇದ್ದರೆ ಅವು ಮೂಲ ವಚನಕ್ಕೆ ಸೇರಿದ ಭಾಗಗಳಲ್ಲವೆಂದೂ ಅವನ್ನು ಆ ಮೇಲೆ ಶೂನ್ಯಸಂಪಾದನೆ ಕಾರರಾದ ಮಹಾದೇವಯ್ಯ ಮುಂತಾದವರು ಸೇರಿಸಿರುವರೆಂದೂ ನೆನಪಿನಲ್ಲಿಡ ಬೇಕು"—ನನ್ನ ಅನುಮಾನವನ್ನು ಪುಷ್ಟೀಕರಿಸುತ್ತದೆ ಹಾಗು ದೃಢಪಡಿ ಸುತ್ತದೆ. ಇದರಿಂದ ಮುಕ್ತಿಕಂಠಾಭರಣದ ಸಂಪಾದಕರು ಇತರರ ಜ್ಞಾನಾನು ಭವಗಳನ್ನು ಪಡೆದುಕೊಳ್ಳದೆ ತಮ್ಮ ಕಿರಿದಾದ ಜ್ಞಾನ ಗತಿಮತಿ (ಕೂಪ ಮಂಡೂಕ ವೃತ್ತಿ) ಯಲ್ಲಿಯೇ ತೊಳಲಾಡಿದ್ದಾರೆ, ಮೆರೆದಿದ್ದಾರೆ ಎಂದು ಕಂಡು ಬರುವುದು.

## B99 ಶೂನ್ಯಸಂಪಾದನೆ

ಡಾ. ಬಸವರಾಜು ಅವರ ಹೇಳಿಕೆಯ ಸತ್ಯಾಸತ್ಯತೆಯನ್ನು ಒರೆಹ ನೋಡುವುದು ಯುಕ್ತವಾಗಿದೆ. ಇದಕ್ಕೆ ಗೂಳೂರು ಸಿದ್ಧವೀರಣ್ಣೊಡೆಯನ ಶೂನ್ಯಸಂಪಾದನೆ ಗ್ರಂಥವು ಸಾಮಗ್ರಿಯನ್ನು ಒದಗಿಸುವುದು. ಅದರಲ್ಲಿ ಏಳನೆಯ ಉಪದೇಶವಾದ 'ಬಸವಣ್ಣನವರ ಸಂಪಾದನೆ'ಯನ್ನು ಪರಿಶೀಲಿಸಿ ನೋಡಿದರೆ ಅದರಲ್ಲಿ ೩೭ ವಚನಗಳಿದ್ದು—೧೯ ಬಸವಣ್ಣನವರವು ೧೭ ಪ್ರಭು- ದೇವರವು ಇವೆ—ಅವುಗಳಲ್ಲಿ ೧೨ ಪ್ರಭುದೇವರು ಬಸವಣ್ಣನನ್ನು ಸಂಬೋಧಿಸಿ

ದಂತಿವೆ, ಮತ್ತು ಬಸವಣ್ಣನು ಪ್ರಭುದೇವರನ್ನು ಸಂಬೋಧಿಸಿದಂತೆ ತೋರುವ ವಚನವು ಒಂದು ಮಾತ್ರ ಇದೆ. ಇದರಂತೆಯೆ ಮೂರನೆಯ ಉಪದೇಶವಾದ 'ಸಿದ್ಧರಾಮೇಶ್ವರನ ಸಂಪಾದನೆ'ಯನ್ನು ಪರಿಶೀಲಿಸಿದರೆ ಅದರಲ್ಲಿ ೧೪೦ ವಚನಗಳಿದ್ದು ಅವುಗಳ ಪೈಕಿ ಪ್ರಭುದೇವರವು ಆಗಿರುವ ೬೮ ವಚನಗಳಲ್ಲಿ ೩೪ ವಚನಗಳು ಪ್ರಭುದೇವರು ಸಿದ್ಧರಾಮನನ್ನು ಸಂಬೋಧಿಸಿದಂತೆ ತೋರುವವು; ಆದರೆ ಸಿದ್ಧರಾಮನವು ಆಗಿರುವ ೭೨ ವಚನಗಳಲ್ಲಿ ಒಂದೇ ಒಂದು ವಚನವು ಸಿದ್ಧರಾಮನು ಪ್ರಭುದೇವರನ್ನು ಸಂಬೋಧಿಸಿದಂತೆ ಸ್ಪಷ್ಟವಿದೆ. ವಸ್ತುಸ್ಥಿತಿಯು ಹೀಗಿರಲು ಪರಸ್ಪರ ಸಂಭಾಷಣೆಯ ಸಂವಾದದ ಸ್ವರೂಪವನ್ನು ಕೊಡಲು ಗೂಳೂರು ಸಿದ್ಧವೀರಣ್ಣನು ವಚನಗಳ ಮಧ್ಯದಲ್ಲಿ ಸ್ವರಚಿತ ವಿವರಣಾತ್ಮಕ ಗದ್ಯದ ಕೊಂಡಿಗಳಿಂದ ಭಿನ್ನಭಿನ್ನವಾಗಿರುವ ವಚನಗಳನ್ನು ಬೆಸೆದಿದ್ದಾನೆ. ಇಂತಹ ಬೆಸುಗೆಯ ಕೊಂಡಿಗಳು ಮೊದಲನೆಯ ಉದಾಹರಣೆಯಲ್ಲಿ ೩೧ ಇದ್ದರೆ ಎರಡನೆಯದರಲ್ಲಿ ೧೦೮ ಇವೆ. ಇಂತಹ ವಿಶ್ಲೇಷಣೆಯಿಂದ ವಚನಗಳು ಸಂಬೋಧನಾತ್ಮಕವಾಗಿರುವುದು ಕೃತಕತೆಯ ಲಕ್ಷಣವೆಂದು ನಾನು ಸ್ವತಃ ಕಂಡುಹಿಡಿದಿದ್ದಕ್ಕೂ ಮತ್ತು ಬಸವರಾಜು ಅವರು ತಮ್ಮ ಶೋಧನೆಯಲ್ಲಿ ಕಂಡುಕೊಂಡದ್ದಕ್ಕೂ ಸಮರ್ಥನೆಯೂ ಹಾಗು ಪುಷ್ಟಿಯೂ ದೊರಕುತ್ತವೆ.

————

# C ಗ್ರಂಥಕರ್ತ

## C1 ಸಿದ್ಧವೀರಸ್ವಾಮಿ

ಮುಕ್ತಿಕಂಠಾಭರಣ ಗ್ರಂಥದ ಕರ್ತನ ಬಗೆಗೆ ಹೇಳುವಾಗ ಅದರ ಸಂಪಾದಕರು ಪುಟ ೪೮ರಲ್ಲಿ ಹೀಗೆ ನುಡಿದಿದ್ದಾರೆ.—“ಗ್ರಂಥ ಪೂರ್ತಿಯಾಗಿ ದೊರೆಯದಿದ್ದುದರಿಂದ ಇದರ ಕರ್ತೃ ಕಾಲ ಇವುಗಳ ಬಗೆಗೆ ಯಾವ ವಿಷಯ ಗಳನ್ನು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ. ಆದರೆ ನಂತರದಲ್ಲಿ ಈ ಗ್ರಂಥದ ಬಗ್ಗೆ ಕಟುವಾದ ಟೀಕೆ ವಿಮರ್ಶೆಗಳು ಪತ್ರಿಕೆಗಳಲ್ಲಿ ಪ್ರಕಟವಾಗಹತ್ತಿದ ಮೇಲೆ ಹೊರಡಿಸಿದ ಸ್ಪಷ್ಟೀಕರಣ—ಇದರ ಉತ್ತರಾರ್ಧವು ಪರಂಜ್ಯೋತಿ (ಆಗಸ್ಟ ೭೨) ಪತ್ರಿಕೆಯಲ್ಲಿ ಪ್ರಕಟವಾಗಿದೆ—ದಲ್ಲಿ “ಈ ಗ್ರಂಥದ ಕರ್ತೃ ಸಿದ್ಧವೀರಸ್ವಾಮಿಗಳು* ಎಂದು ಈ ಗ್ರಂಥದೊಳಗಿನ 862 ನೆಯ ವಚನದ ಅಡಿಯಲ್ಲಿ ಬರೆದ ಟೀಕಿನ ಗದ್ಯದಿಂದ ತಿಳಿದು ಬರುತ್ತದೆ” ಎಂದು ಹೇಳ ಲಾಗಿದೆ. ಇನ್ನೂ ಮುಂದುವರಿದು “ಈ ಸಿದ್ಧವೀರಸ್ವಾಮಿಗಳು ತಮ್ಮದೊಂದು ವಚನವನ್ನು ‘ಮುಕ್ತಿಕಂಠಾಭರಣ’ದಲ್ಲಿ ಸೇರಿಸಿರುವರು” ಎನ್ನಲಾಗಿದೆ. ಈ ದೆಸೆಯಲ್ಲಿ “ಕವಿಚರಿತೆಕಾರರು ‘ತೋಂಟದ ಸಿದ್ಧಲಿಂಗೇಶ್ವರ’ ಎಂಬ ಅಂಕಿತ ಸಿದ್ಧವೀರದೇವರದೆಂದು ಕರ್ನಾಟಕ ಕವಿಚರಿತೆಯಲ್ಲಿ ಹೇಳಿರುವರು (ಕ. ಕ. ಚ. ಭಾಗ ೩, ಪು. ೩೬೧ : ೧೯೨೯)” ಎಂಬುದನ್ನು ಉಲ್ಲೇಖಿಸಲಾಗಿದೆ. ಮತ್ತು “ಈ ಸಿದ್ಧವೀರದೇವನು ಗುರುಶಾಂತದೇವರ ಶಿಷ್ಯನೆಂದು ಮೇಲಿನ [೪೦೯] ವಚನದಲ್ಲಿ ಉಕ್ತವಾಗಿದೆ. ಈತನ ಕಾಲ ಕ್ರಿ. ಶ. ಸು. 1600 ಎಂದು ಕವಿ-ಚರಿತೆಕಾರರು ಊಹಿಸಿರುತ್ತಾರೆ” ಎಂದು ಹೇಳಲಾಗಿದೆ.

## C2 ಸಿದ್ಧವೀರದೇಶಿಕೇಂದ್ರ

ಆದರೆ ವಚನ ೪೨೯ನ್ನು ಪರಿಶೀಲಿಸಲಾಗಿ ಅದರ ವಚನಕಾರನ ಹೆಸರು

---

* ‘ಅಂಜನ’ ಅಧ್ಯಾಯದಲ್ಲಿ ಇದು ಸರಿಯಲ್ಲವೆಂದು ವಿವರಿಸಲಾಗಿದೆ.

'ಸಿದ್ಧವೀರದೇಶಿಕೇಂದ್ರ'‡ ಎಂಬುದು ಕಂಡುಬರುವದು. ಆದುದರಿಂದ ಸಿದ್ಧವೀರದೇಶಿಕೇಂದ್ರನೇ ಗುರುಶಾಂತದೇವನ ಶಿಷ್ಯನು ಹೊರತು ಸಿದ್ಧವೀರದೇವನಲ್ಲ. ಕರ್ನಾಟಕ ಕವಿಚರಿತೆಯಲ್ಲಿಯ ಉಲ್ಲೇಖವನ್ನು ಬಗೆದು ನೋಡಲಾಗಿ ಪುಟ ೩೬೦ ರಲ್ಲಿ ಹೀಗೆ—"ಇನ್ನೂ ಕೆಲವು ವಚನಕಾರರ ಹೆಸರುಗಳೂ ಅಂಕಿತಗಳೂ ದೊರೆತಿವೆ, ವಚನಗಳು ಮಾತ್ರ ಸದ್ಯಃ ಸಿಕ್ಕಿಲ್ಲ. ಈ ವಚನಕಾರರ ಹೆಸರುಗಳನ್ನು ಅಂಕಿತಗಳೊಡನೆ ಕೆಳಗೆ ವರ್ಣಾನುಕ್ರಮದಲ್ಲಿ ಕೊಟ್ಟಿದ್ದೇವೆ. ಇವರಲ್ಲಿ ಹಲವರು ಬಸವನ ಸಮಕಾಲೀನರು"— ಹೇಳಲಾಗಿದೆ. ಮತ್ತು ಪುಟ ೩೬೧ ರಲ್ಲಿ "ಸಿದ್ಧವೀರದೇವ : ತೋಂಟದ ಸಿದ್ಧಲಿಂಗದೇವ" ಎಂದು ಕೊಡಲಾಗಿದೆ. 'ಸಿದ್ಧವೀರಸ್ವಾಮಿ' ಎಂಬುದು 'ಸಿದ್ಧವೀರದೇಶಿಕೇಂದ್ರ' ಎಂದು ಮತ್ತೆ ಮುಂದೆ 'ಸಿದ್ಧವೀರದೇವ' ಎಂದು ಹೇಗೆ ಮತ್ತು ಏಕೆ ಪರ್ಯಾಯಗೊಂಡಿತು ಎಂಬುದು ವಿಚಿತ್ರವಾಗಿದೆ; ಅದನ್ನು ಸ್ಪಷ್ಟೀಕರಿಸಿಲ್ಲ. ಅಲ್ಲದೆ ಪೂರ್ವದಲ್ಲಿ ಸಮಯಾನುಸಾರವಾಗಿ ಇಲ್ಲವೆ ಸಮಯಸಾಧಕತೆಗಾಗಿ ಹೆಸರನ್ನು ಪಲ್ಲಟಗೊಳಿಸುವ ಪ್ರವೃತ್ತಿಯು ಇರಲಿಲ್ಲ. ಆದುದರಿಂದ ಸಂಪಾದಕರೇ ತಮಗೆ ಅನುಕೂಲವಾಗಬೇಕೆಂದು ಸಿದ್ಧವೀರಸ್ವಾಮಿ=ಸಿದ್ಧವೀರದೇಶಿಕೇಂದ್ರ=ಸಿದ್ಧವೀರದೇವ ಎಂದು ಕಲ್ಪಿಸಿಕೊಂಡಿದ್ದಾರೆಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ಹೀಗೆ ಹೆಸರುಗಳ ಅಲ್ಪ ಹೋಲಿಕೆಯ ಮೇಲಿಂದ—ಮತ್ತು ಅವುಗಳು ವಿಶೇಷ ಭಿನ್ನವಾಗಿದ್ದರೂ—ಇಂಥವನೇ ಎಂದು ಖಂಡಿತವಾಗಿ ಹೇಳುವುದು ಹಾಗು ಹೇಳಿರುವುದು ಉಸುಕಿನ ಮೇಲೆ ಕೋಟೆಯನ್ನು ಕಟ್ಟಿದಂತಾಗಿದೆ.

---

‡ ಆದರೆ ಪ್ರಸ್ತಾವನೆ (ಪುಟ ೫) ಯಲ್ಲಿ ಹೇಳಿದುದರ— "ಈ ಸನ್ನಿವೇಶದಲ್ಲಿ ಶ್ರೀಗುರು ತೋಂಟದ ಸಿದ್ಧಲಿಂಗೇಶ್ವರ ಅಂಕಿತವುಳ್ಳ ಸಿದ್ಧವೀರದೇಶಿಕೇಂದ್ರನೆಂಬ ವಚನಕಾರನು ಬರುವುದು ಕಾಲವಿಪರ್ಯಾಸವಲ್ಲದೆ ಬೇರೆ ಏನು" — ಮೇಲಿಂದ ಮುಕ್ತಿಕಂಠಾಭರಣದ ಗ್ರಂಥಕರ್ತನು ಸಿದ್ಧವೀರದೇಶಿಕೇಂದ್ರನು ಅಲ್ಲವೆಂದು ಸಂಪಾದಕರೇ ಸಾರಿದಂತಾಗಿದೆ.

## C3 ಸಿದ್ಧವೀರದೇವ

ಈ ದಿಸೆಯಲ್ಲಿ ಮತ್ತೂ ಮುಂದುವರೆದು "ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯಪರಂಪರೆಗೆ ಸಂಬಧಪಟ್ಟ ಈ ಸಿದ್ಧವೀರದೇವನು [ ಇದಕ್ಕೆ ಆಧಾರಗಳನ್ನು ಹೇಳಿಲ್ಲ] ಶರಣನೂ ಘನ ವಿದ್ವಾಂಸನೂ ಆಗಿರುವನು. ಈತನ ಕೃತಿಗಳು— (1) ಅನಾದಿ ವೀರಶೈವಸಾರ ಸಂಗ್ರಹ (ಸಂಸ್ಕೃತ), (2) ಆಚರಣೆಯ ಸಂಬಂಧದ ವಚನ (3) ಲಿಂಗಸ್ತೋತ್ರ ವಚನ (4) ಮಿಶ್ರಸ್ತೋತ್ರ (5) ಸರ್ವಜ್ಞಮೂರ್ತಿಯ ತ್ರಿಪದಿ ಸಂಗ್ರಹ (6) ಪಾದಸ್ತೋತ್ರ (7) ಮುಕ್ತಿ-ಕಂಠಾಭರಣ [ ಇದರ ಬಗ್ಗೆಯೂ ಪ್ರಮಾಣಗಳನ್ನು ಹೇಳಿಲ್ಲ]. ಕೊನೆಯ ಎರಡು ಕೃತಿಗಳು ಇದುವರೆಗೆ ಉಪಲಬ್ಧವಾಗಿರಲಿಲ್ಲ. ಇದೀಗ 'ಮುಕ್ತಿಕಂಠಾ-ಭರಣ'ವು 'ಅಪೂರ್ಣ' ರೂಪದಲ್ಲಿ ದೊರೆತಿದೆ" ಎಂಬುದಾಗಿ ಬರೆಯಲಾಗಿದೆ. ಈ ಹೇಳಿಕೆಗಳಿಗೆ ಆಧಾರವನ್ನು ಹೇಳಿಲ್ಲವಾದ್ದರಿಂದ ಇವನ್ನು ಅಂಗೀಕರಿಸುವುದು ದುಸ್ತರವಾಗಿದೆಯಲ್ಲದೆ ಸಂಶಯ ನಿವಾರಣೆ ಸ್ವಲ್ಪವೂ ಆಗಿಲ್ಲ.

## C4 ಅನುಭವ

ಮುಕ್ತಿಕಂಠಾಭರಣದ ಕರ್ತೃ ಸಿದ್ಧವೀರದೇವನು ತೋಂಟದ ಸಿದ್ಧ-ಲಿಂಗೇಶ್ವರರ ಘನ ಪರಂಪರೆಯಲ್ಲಿ ಬಂದ ಶಿವಾನುಭಾವಿಯೂ ವಿದ್ವಾಂಸನೂ ಆಗಿದ್ದನೆಂದು ಸ್ಪಷ್ಟವಾಗುತ್ತದೆ ಎಂದು ಹೇಳಿಕೊಂಡಿದ್ದರೂ ಈ ಮೂರು ಕಾರಣಗಳಿಂದ (1) ಹೆಸರುಗಳು ಮನೆತನಗಳ ಹಾಗೂ ಮಠಗಳ ಪರಂಪರೆಯಲ್ಲಿ ತಲೆತಲಾಂತರವಾಗಿ ಪುನರಾವೃತ್ತವಾಗುವುದರಿಂದ ಒಂದು ಹೆಸರಿಗೆ ಕಾಲ ಹಾಗು ಕೃತಿಗಳನ್ನು ಖಂಡಿತವಾಗಿ ನಿಷ್ಕರ್ಷೆಯಾಗಿ ಹೇಳುವುದು ದುಸ್ತರವಾಗಿದೆ (2) ಸಿದ್ಧವೀರಸ್ವಾಮಿ ಅರ್ಥಾತ್ ಸಿದ್ಧವೀರದೇಶಿಕೇಂದ್ರ ಅರ್ಥಾತ್ ಸಿದ್ಧವೀರದೇವ ಎಂಬ ಹೆಸರುಗಳು ಒಬ್ಬನೆ ವ್ಯಕ್ತಿಯ ನಿದರ್ಶನಗಳಾಗಿವೆ ಎಂದು ಸಾಧಿಸಿದುದು ಅಸಾಧುವಾಗಿದೆ. (3) ಮುಕ್ತಿಕಂಠಾಭರಣ ಗ್ರಂಥವು ಹೇಯ, ಅಶ್ಲೀಲ, ತುಚ್ಛ, ಅಧಮ, ದುಷ್ಟ (ಇದನ್ನು ಮುಂದೆ ಸಿದ್ಧಪಡಿಸ-ಲಾಗಿದೆ) ಕೃತಿಯಾಗಿರುವುದರಿಂದ ಇದರ ಕರ್ತೃವು ಸಂಪಾದಕರು ಹೇಳಹೊರಟಿರುವ ಸಿದ್ಧವೀರದೇವನಾಗಿರಲಾರನು.

## C5 ಅನಾಮಧೇಯ

ಮುಕ್ತಿಕಂಠಾಭರಣ ಒಂದು ದುಸ್ಮೃತಿಯೆಂದು ಅದರ ಕರ್ತನಿಗೆ ಅರಿವಿತ್ತು. ಆದುದರಿಂದಲೇ 'ಇದು ರಾಣಿಯರಿಗರುಹಿದ ರಹಸ್ಯ ಬೋಧೆ' (ವಚನ II 49) ಎಂದು ಹೇಳಿ ಅದರ ಪ್ರಕಟನೆಗೆ ನಿಷೇಧದ ಕಟ್ಟುಹಾಕಿ ಪ್ರಕಟಿಸಿದವರಿಗೆ ನಾಯಕನರಕ ತಪ್ಪದು ಎಂಬ ಶಾಪನುಡಿಯನ್ನು ಆಡಿದ್ದಾನೆ. ಅದಕ್ಕೆಂತಲೇ ತನ್ನ ಹೆಸರನ್ನು ಉಲ್ಲೇಖಿಸದೆ ಅನಾಮಧೇಯನಾಗಿದ್ದಾನೆ. ಅಂತೂ ಅವನ ಹೆಸರು ಕಾಲ ಕೃತಿಗಳು ಏನೇ ಇರಲಿ ಅವನ ಗುಣ ಶೀಲ ಯೋಗ್ಯತೆಗಳ ಮೇಲಿಂದ ಅವನು ಒಬ್ಬ ಕಾಮುಕ ಅವಿವಾಹಿತನಾಗಿರಬೇಕು; ಮತ್ತು ಅವನಲ್ಲಿ ಮಹಾನುಭಾವಿ ಬಸವಣ್ಣನವರ ಬಗ್ಗೆ ದುರ್ಭಾವನೆ ಇರಬೇಕು ಎಂಬುದು ಶತಃಸಿದ್ಧ. ಇದಲ್ಲದೆ ಪ್ರಭುದೇವರು ಮುಂತಾದ ಶರಣರಿಂದ ಕೀಳ್ನುಡಿಗಳನ್ನು ಸ್ವಕಲ್ಪತೆಯಿಂದ ಹೇಳಿಸಿ ಅವರ ಘನತೆಗೆ ಪೂಜ್ಯತೆಗೆ ಕಳಂಕ ಹಚ್ಚಿದುದನ್ನು ನೋಡಿದರೆ ಅವನು ವೀರಶೈವನಾಗಿದ್ದೂ ವೀರಶೈವಧರ್ಮದ ಬಗ್ಗೆ ಜುಗುಪ್ಸೆ ಹುಟ್ಟಿ ಇಲ್ಲವೆ ವೀರಶೈವ ಧರ್ಮದ ಜಗದ್ಗುರುವೆನಿಸಿಕೊಳ್ಳಬೇಕು, ಮತ್ತು ಮುಕ್ತಿಕಂಠಾಭರಣದಲ್ಲಿ ಹೇಳಿದ ರೇವಣಸಿದ್ಧನಂತೆ ಅಪಾರ ಧರ್ಮಪತ್ನಿಯರನ್ನು ಹೊಂದಬೇಕು ಎಂಬ ಬೃಹತ್ತರ ಆಶಾಗೋಪುರಗಳನ್ನು ಕಟ್ಟಿಕೊಂಡು ಅವು ಸಫಲವಾಗದೆ ನಿರಾಶೆ ಹೊಂದಿ ಲಿಂಗವಂತ ಧರ್ಮವನ್ನು ಅದರ ಆಚಾರವನ್ನು ಮತ್ತು ಶರಣರನ್ನು ತುಚ್ಛೀಕರಿಸಲೆಂದೇ ಈ ಮುಕ್ತಿ-ಕಂಠಾಭರಣ (ಈ ಗ್ರಂಥದ ಹೆಸರೇ ಅವೀರಶೈವವಾಗಿದೆ; ಏಕೆಂದರೆ ಮುಕ್ತಿಯು ವೀರಶೈವರ ಗುರಿಯಲ್ಲ) ಗ್ರಂಥವನ್ನು ಕೆಲವು ನಿಜ ವಚನಗಳನ್ನು ಸಂಕಲಿಸಿ ಮತ್ತು ಅನೇಕ ಖೊಟ್ಟಿ ವಚನಗಳನ್ನು ಕಲ್ಪಿಸಿ ರಚಿಸಿದ್ದಾನೆ.

## C6 ಕಾಲ

ಮುಕ್ತಿಕಂಠಾಭರಣ ಗ್ರಂಥದ ಸಂಪಾದಕರು ನಂತರ ಹೊರಡಿಸಿದ ಸ್ಪಷ್ಟೀಕರಣದಲ್ಲಿ ಗ್ರಂಥಕರ್ತನು ಸಿದ್ಧವೀರದೇವ ಮತ್ತು ಅವನ ಕಾಲವು ಸು. ೧೬೦೦ ಎಂದು ಬಾಹ್ಯ ಪ್ರಮಾಣಗಳಿಂದ ಹೇಳಿದ್ದಾರೆ. ಆದರೆ ಅದು ಸಮಂಜಸವಾಗಿಲ್ಲ, ಗ್ರಾಹ್ಯವಾಗಿಲ್ಲ. ಏಕೆಂದರೆ ಅದರ ಕರ್ತೃವು ಸಿದ್ಧವೀರದೇವ ಅಲ್ಲ

ಎಂಬುದನ್ನು ಮೇಲೆ ಸಾಧಿಸಲಾಗಿದೆ. ಆ ಕಾರಣ ಅವರು ಹೇಳಿದ ಕಾಲವೂ ಸರಿಯಾಗಲಾರದು. ಆದುದರಿಂದ ಈ ಸಮಸ್ಯೆಯ ಪರಿಹಾರಕ್ಕೆ ಗ್ರಂಥಾಂತರ್ಗತ ಪುರಾವೆಗಳನ್ನು ಪರಿಶೀಲಿಸಿ ಅವುಗಳಿಂದ ಕಾಲವನ್ನು ನಿರ್ಣಯಿಸುವುದು ಸುಗಮವಾಗಿದೆ. ಈ ಪರಿಯ ಶೋಧನೆಯಲ್ಲಿ ಕೆಳಗಿನ ಅಂಶಗಳು ಒಂದು ಕಾಲ ನಿರ್ಧಾರವನ್ನು ಒದಗಿಸುತ್ತವೆ.—

(1) ವಚನ IV ೨೫೦ ದಲ್ಲಿ 'ಒಂದು ತಾಸು ಬೀಗಿದಡೆ, ಎರಡು ತಾಸು ಬೀಗಿದಡೆ, ಮೂರು ತಾಸು ಬೀಗಿದಡೆ' ಎಂಬ ಪದಗಳು ಬಂದಿವೆ. ತಾಸು ಈ ಶಬ್ದವು ಗಡಿಯಾರಗಳು ನಿರ್ಮಾಣವಾಗಿ ಭಾರತದಲ್ಲಿ ಸಾಮಾನ್ಯವಾಗಿ ಪ್ರಸಾರವಾದ ನಂತರ ಪ್ರಚಲಿತವಾಯಿತು. ಅದರ ಪೂರ್ವದಲ್ಲಿ ಗಳಿಗೆ ಕ್ಷಣ ಮುಂತಾದ ಕಾಲಸೂಚಕಗಳು ವಾಙ್ಮಯದಲ್ಲಿ ಉಕ್ತವಾಗಿವೆ. ಆದುದರಿಂದ ತಾಸು ಈ ಪದ ಪ್ರಯೋಗವು ಬಳಕೆಯಲ್ಲಿ ಸುಮಾರು ೧೯೨೦ ರ ಸುಮಾರಿಗೆ ಬಂತು.

(3) ಕಾಲಸೂಚಕವಾದ ಇನ್ನೊಂದು ವಚನವು ಈ ಗ್ರಂಥದಲ್ಲಿ ದೊರಕಿದುದು ವಚನ IV ೧೯ರಲ್ಲಿ; ಇದರಲ್ಲಿ 'ತುಡುಗು ವ್ಯಾಪಾರವ ಮಾಡಿ' ಎಂಬ ಮಾತು ಇದೆ. ತುಡುಗು ವ್ಯಾಪಾರವು ಈಗಿನ ಪರಿಭಾಷೆಯಲ್ಲಿ ಕಳ್ಳ ವ್ಯಾಪಾರವು. ಈ ತುಡುಗು ವ್ಯಾಪಾರದ ವಿಚಾರ ಹಾಗು ಕಲ್ಪನೆಯು 'ಕಂಟ್ರೋಲ'ದ ಕೂಸು ಆಗಿದೆ. ಮಾಲನ್ನು ಬಚ್ಚಿಟ್ಟು ಅಭಾವ ಪರಿಸ್ಥಿತಿಯನ್ನು ಹುಟ್ಟಿಸಿ ಅಡ್ಡಾದಿಡ್ಡಿಯಾಗಿ ಬೇಕಾದ ಬೆಲೆಗೆ ಸಾಮಾನು ಮಾರುವುದು, ಇದೇ ಕಳ್ಳವ್ಯಾಪಾರ. ಇದು ಪ್ರಾರಂಭವಾದದ್ದು ಮೊದಲನೆಯ ಜಾಗತಿಕ ಯುದ್ಧದ ಪರಿಸರದಲ್ಲಿ, ಆದುದರಿಂದ 'ತುಡುಗು ವ್ಯಾಪಾರ' ಎಂದು ಹೇಳಿದುದು ಈ ಮುಕ್ತಿಕಂಠಾಭರಣ ಗ್ರಂಥದ ಕಾಲವು ಸು. ೧೯೨೦ ಎಂದು ನಿರ್ಣಯಿಸುವುದಕ್ಕೆ ಆಧಾರವನ್ನು ಒದಗಿಸುತ್ತದೆ.

(3) ಈ ಕಾಲ ನಿರ್ಣಯಕ್ಕೆ ಇನ್ನೊಂದು ಅನುಮೋದನೆಯು ವಚನ IV ೪೪೪ ದಲ್ಲಿ ದೊರಕುವುದು. ಇದರಲ್ಲಿ ತಿರುಪತಿಯ ಭಕ್ತರ ಕುರಿತು 'ಗಡ್ಡ ಮುಂಡೆಯ ನೂಕಿ ವೆಂಕಟಗಿರಿ ಸಂಕಟನಾಥನೆಂಬಂತೆ ಇದೇನಜ್ಞಾನ-

ಗುಲ್ಮ' ಎಂದು ಹೇಳಲಾಗಿದೆ. ಈ ದಿಸೆಯಲ್ಲಿ ಕುತೂಹಲದಿಂದ ವಿಚಾರಿಸಲಾಗಿ ತಿರುಪತಿಯ ಭಕ್ತರ ಸಮೂಹವು ಮತ್ತು ಆ ದೇವಸ್ಥಾನಕ್ಕೆ ಹೇರಳವಾಗಿ ಕಪ್ಪು ಕಾಣಿಕೆಗಳು ಭಕ್ತರಿಂದ ಲಭಿಸಹತ್ತಿದುದು ೧೯೨೦ ರಿಂದ ಅಂದರೆ ಮೊದಲನೆಯ ಮಹಾಯುದ್ಧದ ಕಾಲದಿಂದೀಚೆಗೆ. ವಚನ III ೧೬ ರಲ್ಲಿ 'ಮತಮತದ ದೂಷಣೆ ಯುಗಯುಗಾಂತರ ಬಂದ ವಾರ್ತೆ' ಎಂದು ಇದು ಸಲ್ಲದೆಂದು ಹೇಳಿರುವ ಗ್ರಂಥಕರ್ತನು ತಿರುಪತಿ ಕ್ಷೇತ್ರದ ಬಗೆಗೆ ದೂಷಣೆಯ ಬುದ್ಧಿಯಿಂದ ನುಡಿದುದು ತಾನು ಅಂಟಿಕೊಂಡಿರುವ ಸಂಬಂಧಿಸಿದ ಸ್ಥಾನಕ್ಕೆ ಧನಪ್ರೋತ್ಸಾಹಗಳು ದೊರಕದಿರುವ ಮೂಲಕ ಅಸೂಯೆಯ ಕಾರಣ ದಿಂದಾಗಿದೆ.

ಈ ತರಹದ ವಿವಿಧ ಆಧಾರಗಳು ಈ ಗ್ರಂಥದಲ್ಲಿ ಬಳಸಿದ ಪದ ಹಾಗು ವ್ಯಾಕರಣ ಪ್ರಯೋಗಗಳಿಂದ ಇನ್ನೂ ಬಹಳಷ್ಟು ದೊರಕಬಹುದಾದರೂ ಇವಿಷ್ಟರ ಮೇಲಿಂದಲೇ ಮುಕ್ತಿಕಂಠಾಭರಣ ಗ್ರಂಥರಚನೆಯ ಕಾಲ ಸುಮಾರು ೧೯೨೦ ಎಂಬ ನಿರ್ಣಯವು ಹೊರಡುತ್ತದೆ.

## C7 ಹಸ್ತಪ್ರತಿ

ಪ್ರಾಚೀನ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸುವಲ್ಲಿ ಆಧಾರಿತವಾದ ಹಸ್ತಪ್ರತಿಗಳ ಮತ್ತು ಪ್ರಕಟಿತ ಗ್ರಂಥಗಳ ಬಗೆಗೆ ಪೂರ್ಣ ವಿವರಗಳನ್ನು ಸಂಪಾದಕರು ಓದುಗರ ಅವಗಾಹನೆಗಾಗಿ ಒದಗಿಸುತ್ತಾರೆ. ಏಕೆಂದರೆ, ಆ ಗ್ರಂಥದ ಬಗ್ಗೆ ಸಾಕಷ್ಟು ತಿಳಿವಳಿಕೆ ನೀಡಲು ಮತ್ತು ಪರಿಶೋಧನೆ ಹಾಗು ಸಂಶೋಧನೆ ನಡೆಸಲು ಮುಂದುವರೆಸಲು ಇದರಿಂದ ಸಾಮಗ್ರಿಯು ಹಾಗು ಅಂಶಗಳು ದೊರಕುತ್ತವೆ. ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನೆಗಳೆಲ್ಲವು ಗಳಲ್ಲಿಯೂ ಇದನ್ನು ವಿಶದೀಕರಿಸಲಾಗಿದೆ. ಆದರೆ ಮುಕ್ತಿಕಂಠಾಭರಣ ವಿಷಯದಲ್ಲಿ ಇದನ್ನು ಬುದ್ಧಿಪೂರ್ವಕವಾಗಿ ಓದುಗರಿಂದ ಮರೆಮಾಚಲಾಗಿದೆ. ಇದರ ಬಗ್ಗೆ ಪ್ರಸ್ತಾವನೆಯಲ್ಲಿ 'ಪ್ರಸ್ತುತ ಗ್ರಂಥ ಅಪೂರ್ಣವಾಗಿದೆ. ನಮಗೆ ದೊರೆತುದು ಒಂದು ಪ್ರತಿ' ಎಂದಿಷ್ಟೇ ಹೇಳಲಾಗಿದೆ.

## C71 ಉಲ್ಲೇಖ

ಇವಿಷ್ಟೇ ಅಂಶಗಳು ಚಿಕಿತ್ಸಕ ಬುದ್ಧಿಗೆ ಅವಶ್ಯ ಮಾಹಿತಿಯನ್ನು ಒದಗಿಸ ಲಾರದ ಮೂಲಕ ಮುಕ್ತಿಕಂಠಾಭರಣದ ವಿಮರ್ಶೆಯ ಲೇಖಾಂಕ ೪ (ನವಸಂದೇಶ ೧೪–೬–೭೨) ರಲ್ಲಿ (1) ಹಸ್ತಪ್ರತಿಯು ಯಾವ ಸ್ಥಳದಲ್ಲಿ ಇತ್ತು (2) ಯಾರ ಮುಖಾಂತರವಾಗಿ ಬಂತು (3) ಅದು ತಾಳೆಗರಿಯದೋ ಇಲ್ಲವೆ ಕಾಗದದೋ (4) ಹಸ್ತಪ್ರತಿಯ ಸ್ಥಿತಿಗತಿ (5) ಅದರ ಪುಟ ಸಂಖ್ಯೆಗಳು (6) ಅದರ ಲೇಖಕರ ಹೆಸರಿರಬಹುದಾದ ಪುಟಗಳು ಕಳೆದಿವೆಯೋ, ಇವೆಲ್ಲ ಅಂಶಗಳ ಬಗ್ಗೆ ಪ್ರಶ್ನೆ ಎತ್ತಲಾಗಿದೆ. ಇವುಗಳಿಗೆ ಉತ್ತರ ದೊರಕುವುದೆಂದು ಹಾಗು ಮುಂದಿನ ಅನ್ವೇಷಣೆಗೆ ಮಾರ್ಗ ತೋರುವುದೆಂಬ ಭಾವನೆ ಇಟ್ಟು ಕೊಳ್ಳಲಾಗಿತ್ತು. ಆದರೆ ಇದರ ನಂತರದಲ್ಲಿ ಸಂಪಾದಕರು ಹೊರಡಿಸಿದ ಸ್ಪಷ್ಟೀಕರಣದಲ್ಲಿ ಇವರ ಬಗ್ಗೆ ಚಕಾರವನ್ನು ಆಡದೆ ಅದನ್ನು ರಹಸ್ಯವಾಗಿಯೇ ಇಟ್ಟಿದ್ದಾರೆ.

## C72 ಮೂಲಸ್ಥಾನ

ಇದರ ಗೂಢವನ್ನು ಬಯಲು ಮಾಡುವುದಕ್ಕಾಗಿ ಮತ್ತು ಆದರ ಮೇಲೆ ಬೆಳಕು ಚಲ್ಲುವುದಕ್ಕಾಗಿ ಸಾಹಿತ್ಯ ಶೋಧನೆಯ ಕಾರ್ಯವನ್ನು ಮಾಡ ಬೇಕಾಯಿತು. ಕರ್ನಾಟಕ ವಿಶ್ವವಿದ್ಯಾಲಯದವರು ೧೯೬೮ ರಲ್ಲಿ ಪ್ರಕಟಿಸಿದ ಬಸವಣ್ಣನವರ ವಚನಗಳು ಈ ಗ್ರಂಥವನ್ನು ಪರಿಶೀಲಿಸಲು ಅದರಲ್ಲಿ ಹೆಚ್ಚಿನ ವಚನಗಳ (ಕಾಂಡ ೨) ಭಾಗದಲ್ಲಿ ಮುಕ್ತಿಕಂಠಾಭರಣ ಗ್ರಂಥದಿಂದ ೧೯ ವಚನ ಗಳನ್ನು ಎತ್ತಿಕೊಂಡು ಸೇರಿಸಿದುದು (ಆ ವಚನ ಗ್ರಂಥದ ಪುಟ ೨೬ ನೋಡ ಬಹುದು) ಗೊತ್ತಾಗುತ್ತದೆ. ಅದರಲ್ಲಿ ಕೊಟ್ಟಿರುವ ಸಂಕ್ಷೇಪಗಳ ಪಟ್ಟಿಯಲ್ಲಿ ಮುಕ್ತಿ = ಮುಕ್ತಿಕಂಠಾಭರಣ ಎಂಬ ಉಲ್ಲೇಖವಿದೆ. ಆದರೆ ಮುಕ್ತಿಕಂಠಾ-ಭರಣದ ಹಸ್ತಪ್ರತಿಯು ಬಗ್ಗೆ ಯಾವ ಸುಳುವೂ ದೊರಕುವುದಿಲ್ಲ. ಈ ಶೋಧನೆಯನ್ನು ಮುಂದುವರೆಸಲು ಕ. ವಿ. ವಿ. ಪ್ರಕಟಿಸಿದ (೧೯೬೮) ಸಿದ್ಧರಾಮೇಶ್ವರನ ವಚನಗಳು ಎಂಬ ಗ್ರಂಥದಲ್ಲಿ ಮುಕ್ತಿಕಂಠಾಭರಣ ಗ್ರಂಥ ದಿಂದ ಎತ್ತಿಕೊಳ್ಳಲಾದ ೧೪ ವಚನಗಳು ಅದರ ಹೆಚ್ಚಿನ ವಚನಗಳು ಭಾಗದಲ್ಲಿ

ದೊರಕುತ್ತವೆ. ಇದರಲ್ಲಿಯ ಸಂಕ್ಷೇಪಗಳ ಪಟ್ಟಿಯನ್ನು ನೋಡಲಾಗಿ ಮು= ಗುರುಪ್ರಶಂಸಾ ಮುಕ್ತಿಕಂಠಾಭರಣ ಎಂದು ಹೇಳಿದುದು ಕಂಡುಬರುವುದು. ಇವರ ನಂತರದ ಅನ್ವೇಷಣೆಯಲ್ಲಿ "ಶ್ರೀ ಸಿದ್ಧರಾಮೇಶ್ವರ ವಚನಗಳ ಸಂಸ್ಕರಣಕ್ಕಾಗಿ ಬಳಸಿದ 'ಆಕರ' ಗಳ ವಿವರ"ಗಳ ಪಟ್ಟಿಯಲ್ಲಿ ೭೨ನೆಯ ಕ್ರಮಾಂಕದಲ್ಲಿ ಪ್ರತಿಯ ಹೆಸರು ಗುರುಪ್ರಶಂಸಾ ಮುಕ್ತಿಕಂಠಾಭರಣ ಎಂದಿದ್ದು ಅದು ಕಾಗದದ ಪ್ರತಿಯಾಗಿದ್ದು ಅದು ಶ್ರೀ ವಿಜಯ ಮಹಾಂತೇಶ ಗ್ರಂಥಾಲಯ, ಶಿವಯೋಗಮಂದಿರದಿಂದ ದೊರಕಿದ್ದು ಅದರ ನಂಬರು ೨೬೩ ಇದೆ ಎಂಬುದು ಕಂಡುಬರುವುದು.

## C73 ಆಧರಿತ ಪ್ರತಿ

ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನೆಗಳಾದ "ಬಸವಣ್ಣನವರ ವಚನಗಳು" ಗ್ರಂಥದಲ್ಲಿ ಮುಕ್ತಿ ಎಂಬ ಸಂಕ್ಷೇಪ ಹೇಳಿ ಅದರ ಪೂರ್ಣ ಹೆಸರು ಮುಕ್ತಿಕಂಠಾಭರಣ ಎಂದು ಹೇಳಿದುದೂ ಮತ್ತು "ಶ್ರೀ ಸಿದ್ಧರಾಮೇಶ್ವರ ವಚನಗಳು" ಗ್ರಂಥದಲ್ಲಿ ಮು ಎಂಬ ಸಂಕ್ಷೇಪಕ್ಕೆ ಗುರುಪ್ರಶಂಸಾ ಮುಕ್ತಿಕಂಠಾಭರಣ ಎಂದು ಹೇಳಿದುದೂ ಮತ್ತು ಈಗ್ಗೆ ಮುಕ್ತಿಕಂಠಾಭರಣ ಎಂದು ಪ್ರಕಟವಾದ ಗ್ರಂಥಕ್ಕೆ ಆಧರಿತವಾದ ಹಸ್ತಪ್ರತಿಯೂ ಒಂದೇ ಆಗಿದೆ ಎಂಬುದು ಮೊದಲಿನವೆರಡು ಗ್ರಂಥಗಳಲ್ಲಿ ಹೆಚ್ಚಿನ ವಚನಗಳಾಗಿ ಮುಕ್ತಿಕಂಠಾಭರಣದಿಂದ ಎತ್ತಿಕೊಂಡು ಸೇರಿಸಿದ ಆಧಾರ ಹಾಗು ಪ್ರಮಾಣಗಳಿಂದ ನಿರ್ಧಾರವಾಗುತ್ತದೆ.

———

# D ಸಂಪಾದನಾ ಕಾರ್ಯ

## D1 ಬಹಿರಂಗ

ಇನ್ನು ಮುಕ್ತಿಕಂಠಾಭರಣ ಗ್ರಂಥದ ಸಂಪಾದನಾ ಕಾರ್ಯವನ್ನು ಎಂತು ಮಾಡಲಾಗಿದೆ ಎಂಬುದನ್ನು ಪರೀಕ್ಷಿಸಬೇಕಾಗಿದೆ. ಈ ಸಂಬಂಧದಲ್ಲಿ ಸಂಪಾದನಾ ಕಾರ್ಯವನ್ನು ಎರಡು ಬಗೆಯಿಂದ, ಅಂದರೆ ಅದರ ಅಂತರಂಗ ಮತ್ತು ಬಹಿರಂಗ, ನೋಡಬಹುದು. ಬಹಿರಂಗದ ಬಗೆಯು ಕರ್ನಾಟಕ ವಿಶ್ವವಿದ್ಯಾಲಯದ ವಚನ ವಾಙ್ಮಯ ಸಂಪಾದನಾ ಕಾರ್ಯದ ವೈಶಿಷ್ಟ್ಯ ವಾಗಿರುವುದರಿಂದ ಅದನ್ನು ಮೊದಲು ಪರಿಶೀಲಿಸುವುದು ಸೂಕ್ತವಾಗಿದೆ. ಈ ದಿಶೆಯಲ್ಲಿ ಎರಡು ಲಕ್ಷಣಗಳು ಗಮನಾರ್ಹವಾಗಿವೆ.—(1) ವಚನಗಳನ್ನು ಪುಟದ ಹರವಿನ ತುಂಬ ಗದ್ಯದಂತೆ ಮುದ್ರಿಸದೆ ಪದ್ಯಗಳಲ್ಲಿಯಂತೆ ಪಾದಗಳಾಗಿ ತುಂಡರಿಸಿ, ಒಂದೊಂದು ಪಾದಕ್ಕೆ ಒಂದೊಂದು ಸಾಲಾಗಿ ಮುದ್ರಿಸಿರುವುದು (2) ವಚನಗಳಿಗೆ ವಿರಾಮ ಚಿನ್ಹೆಗಳನ್ನು ಹಾಕುವುದು. ಇವೆರಡನ್ನು ಇಲ್ಲಿ ಒರೆದು ನೋಡಲಾಗಿದೆ.

### D11 ಪಾದ

ವಚನಗಳು ಹಸ್ತಪ್ರತಿಯಲ್ಲಿ—ತಾಡವಾಲಿಯದೇ ಆಗಲಿ ಕಾಗದದೇ ಆಗಲಿ—ಗದ್ಯದಂತೆ ಆರಂಭದಿಂದ ಕೊನೆಯವರೆಗೆ ಏಕಾಕಾರವಾಗಿ ಬರೆಯ ಲಾಗಿರುತ್ತದೆ. ಆದರೆ ಮುಕ್ತಿಕಂಠಾಭರಣದ ಸಂಪಾದಕರು ಅದನ್ನು ಪದ್ಯ ವಲ್ಲಿಯ ಸಾಲುಗಳಂತೆ ತುಂಡರಿಸಿ ಪಾದಗಳಂತೆ ಮುದ್ರಿಸಿರುತ್ತಾರೆ. ಇಂತಹ ವಿಚಾರ ಹಾಗು ಪದ್ಧತಿಯ ಪ್ರತೋದಕರು ಲಿಂ. ಪ್ರೊ. ಎಸ್. ಎಸ್. ಬಸವನಾಳರು. ಅವರು ತಾವು ಸಂಪಾದಿಸಿದ ಬಸವಣ್ಣನವರ ಷಟ್‌ಸ್ಥಲದ ವಚನಗಳನ್ನು (ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ, ಧಾರವಾಡ, ಪ್ರಕಾಶನ ೧೯೬೨) ಈ ಪರಿಯಾಗಿ ಮಾಡಿದ್ದಾರೆ. ಹೀಗೆ ಮಾಡಿರುವುದು ವಚನಗಳಲ್ಲಿಯ ಲಯ (rhythm) ವನ್ನು ಗಮನಿಸಿ ಅದ ರಂತೆ ಪ್ರತಿಯೊಂದು ವಚನಕ್ಕೆ ಸೂಕ್ತವಾದ ಪಾದಗಳನ್ನು ಕಲ್ಪಿಸಿರುವುದು

ಆಗಿವೆ. ಆದರೂ ಅವರು ಇದು ಒಂದು ನಿರ್ದಿಷ್ಟ ನಿಶ್ಚಿತ ಕ್ರಮವಲ್ಲ; ಅದು ವ್ಯಕ್ತಿ ವ್ಯಕ್ತಿಗಳಿಗೆ ಭಿನ್ನವಾಗಬಹುದು; ಆದಾಗ್ಯೂ ತಾವು ಹಾಗೆ ಮಾಡಿರುವುದು ವಚನಗಳ ಭಾವ ಅರ್ಥಗಳನ್ನು ಗಮನಿಸುವುದಕ್ಕೆ ಸುಗಮವಾಗಿರುವುದೆಂದು ಭಾವಿಸಿ ಹಾಗೆ ಮಾಡಿದ್ದಾಗಿದೆ ಎಂದು ಹೇಳಿದ್ದಾರೆ. ಇದಕ್ಕೆ ಸಂಬಂಧಿಸಿ 'ಬಾಯಬಲ' ಗ್ರಂಥದ ಉದಾಹರಣೆಯನ್ನು ಹೇಳಿದ್ದಾರೆ. ಬಾಯಬಲ ಸೊಸಾಯಿಟಿಯು ಪ್ರಕಟಿಸಿದ ಪ್ರಮಾಣಿತ ಪ್ರತಿಗಳು ಸಾಂಪ್ರದಾಯದಂತೆ ಪ್ರಕಟಿಸಲ್ಪಡುತ್ತ ಬಂದಿರುವವಾದರೂ ಅದನ್ನೇ ವ್ಯಕ್ತಿಗಳು ಪ್ರಕಟಿಸುವಾಗ ತಮತಮಗೆ ಉಚಿತವಾಗಿ ಕಂಡುಬಂದಂತೆ ಪದ್ಯದಲ್ಲಿಯ ಪಾದಗಳಂತೆ ಲಯಬದ್ಧವಾಗಿ ಮಾಡಿರುವರು ಎಂದು ಹೇಳಿದ್ದಾರೆ. ಈ ವಿಷಯದಲ್ಲಿ ಲಿಂ. ಬಸವನಾಳರು ನೀಡಿದ ಎಚ್ಚರಿಕೆಯನ್ನು ಉಚ್ಚರಿಸುವುದು ವಿಹಿತವಾಗಿದೆ. ಅದು ಹೀಗಿದೆ.—"ಆದರೆ ಇದರಲ್ಲೆಲ್ಲ ಒಂದು ಬಗೆಯ ನಿಯಮ ಅಥವಾ ಕ್ರಮವಿರಬೇಕೆಂಬುದು ಸಾಮಾನ್ಯ". ಆದರೆ ಮುಕ್ತಿಕಂಠಾಭರಣದ ವಚನಗಳ ಪಾದರಚನೆಯಲ್ಲಿ ಇಂತಹದೇನೂ ಕಂಡುಬರುವುದಿಲ್ಲ.

## D12 ಗಾತ್ರ

ಆದುದರಿಂದ ವಚನಗಳನ್ನು ಪಾದ ಪಾದಗಳಾಗಿ ಬರೆಯುವದು ಒಂದು ನಿಶ್ಚಿತ ನಿರ್ಧಾರಿತ ಪ್ರಮಾಣಿತ ಕ್ರಮವಲ್ಲ. ಕಾರಣ ವಚನಗಳು ಹಸ್ತಪ್ರತಿಯಲ್ಲಿರುವಂತೆ ಗದ್ಯದ ಪ್ರಕಾರದಲ್ಲಿ ಪುಟದ ಹರವಿನ ತುಂಬ ಮುದ್ರಿಸುವುದು ಸಮಂಜಸವಾಗಿರುವದು. ವಚನ ಪಿತಾಮಹರಾದ ಫ. ಗು. ಹಳಕಟ್ಟಿಯವರು ತಮ್ಮ ವಚನ ಗ್ರಂಥಗಳನ್ನೆಲ್ಲ ಇದೇ ಪರಿಯಾಗಿ ಮುದ್ರಿಸಿದ್ದಾರೆ. ಅದರಂತೆಯೇ ಇತರ ವ್ಯಕ್ತಿಗಳೂ ಸಂಸ್ಥೆಗಳೂ ಮಾಡಿವೆ. ಮೈಸೂರು ವಿಶ್ವವಿದ್ಯಾಲಯದವರು 'ವಚನಧರ್ಮಸಾರ' ಪುಸ್ತಕವನ್ನು ಸಾಂಪ್ರದಾಯಕ್ಕನುಸಾರವಾಗಿ ಮುದ್ರಿಸಿ ಪ್ರಕಟಗೊಳಿಸಿದ್ದಾರೆ. ಆದರೆ ಕರ್ನಾಟಕ ವಿಶ್ವವಿದ್ಯಾಲಯದ ವಚನ ವಾಙ್ಮಯ ಶಾಖೆಯವರು ಇವಕ್ಕೆ ವ್ಯತಿರಿಕ್ತವಾಗಿ ವಚನಗಳನ್ನು ಪದ್ಯದಲ್ಲಿಯ ಪಾದಗಳಂತೆ ತುಂಡರಿಸಿ ಅಚ್ಚು ಹಾಕಿಸಿದ್ದಾರೆ. ಇದರಿಂದ ಪುಟಗಳು ಹೆಚ್ಚಾಗಿ ಗ್ರಂಥದ ಗಾತ್ರವೂ ಬೆಳೆಯುವದು. ಹೀಗೆ ಮಾಡಿರುವುದು ಕ್ರಮರಾಹಿತ್ಯವಲ್ಲದೆ

ವ್ಯಕ್ತಿಯ ಲಹರಿ (whim) ಯಾಗಿ ಪರಿಣಮಿಸಿದುವುದು ಮುಕ್ತಿಕಂಠಾಭರಣ ಗ್ರಂಥದಲ್ಲಿ ಸ್ಪಷ್ಟವಾಗಿದೆ. ಇದನ್ನು ಕರ್ನಾಟಕ ವಿಶ್ವವಿದ್ಯಾಲಯದ ವಚನ ವಾಙ್ಮಯ ಪ್ರಕಟನೆಗಳೆಲ್ಲವುಗಳಲ್ಲಿಯೂ ಕಂಡುಕೊಳ್ಳಬಹುದು. ಹೀಗೆ ಮಾಡಿದುದರ ಅಸಮಂಜಸತೆಯು ಅಯೋಗ್ಯತೆಯು ಪರಿಹಾಸವು ಮುಕ್ತಿ-ಕಂಠಾಭರಣದಲ್ಲಿ ಸ್ಪಷ್ಟವಾಗಿ ಸಂಶಯಾತೀತವಾಗಿ ಒಡಮೂಡಿದೆ. ಇದರಲ್ಲಿ ಕೆಲವು ವಚನಗಳು ಪುನರಾವೃತ್ತವಾಗಿರುವವು. ಹೀಗೆ ಪುನರಾವೃತ್ತವಾದ ವಚನಗಳಲ್ಲಿಯ ಭಿನ್ನತೆಯ ಮೂಲಕ ವೈಲಕ್ಷಣ್ಯವು ಹಾಗು ಅಪಹಾಸ್ಯವು ಕಂಡುಬರುವದು. ಆಚಾರ ಪ್ರಶಂಸೆ ಪ್ರಕರಣದಲ್ಲಿಯ ಈ ವಚನಗಳನ್ನು ಉದಾಹರಣಾರ್ಥವಾಗಿ ತುಲನೆ ಮಾಡಿ ನೋಡಬಹುದು.— ವಚನ ೨೬೬ ಪ್ರತಿಯಾಗಿ ೩೯೪, ೧೩೮ ಪ್ರ. ೪೬೬, ೨೬೭ ಪ್ರ. ೩೯೫ ಮತ್ತು ೬೩೮ ಪ್ರ. ೨೪. ಇದರಿಂದ ಒಂದೇ ವಚನವು ಬೇರೆ ಬೇರೆಡೆಗೆ ಪ್ರಕಟವಾದಾಗ ಸಾಲು (ಪಾದ) ಗಳ ಸಂಖ್ಯೆಯಲ್ಲಿ ಹೇಗೆ ಹೆಚ್ಚು ಕಡಿಮೆಯಾಗಿದೆಯೆಂಬುದು ಕಂಡುಬರುವುದು. ವಚನ ೨೬೬ ರಲ್ಲಿ ೪ ಸಾಲುಗಳಾಗಿದ್ದರೆ ೩೯೪ ರಲ್ಲಿ ೫ ಸಾಲುಗಳಾಗಿದೆ: ಅದರಂತೆಯೆ ೪೬೬ ರಲ್ಲಿ ೩ ಇದ್ದರೆ ೧೩೮ ರಲ್ಲಿ ೪, ೩೯೫ ರಲ್ಲಿ ೯ ಇದ್ದರೆ ೨೬೭ ರಲ್ಲಿ ೧೧, ಮತ್ತು I ೨೪ ರಲ್ಲಿ ೫ ಇದ್ದರೆ ೬೩೮ ರಲ್ಲಿ ೬ ಸಾಲುಗಳಾಗಿರುವುದು ಕಂಡುಬರುವುದು. ಆದುದರಿಂದ ವಚನಗಳನ್ನು ಪದ್ಯದಲ್ಲಿಯ ಪಾದಗಳಂತೆ ತುಂಡು ಸಾಲಾಗಿ ಮುದ್ರಿಸಿರುವುದು ಒಂದು ರೀತಿ, ನಿಯಮ, ಪದ್ಧತಿ, ಕ್ರಮವಾಗಿರದೆ ಅದು ಒಂದು ತೋರಿಕೆ (show) ಯಾಗಿ ಸಾಲುಗಳ ಸಂಖ್ಯೆಯನ್ನು ಅರ್ಥಾತ್ ಪುಟ ಸಂಖ್ಯೆಯನ್ನು ಹೆಚ್ಚಿಸುವ ತಂತ್ರವಾಗಿದೆ ಎಂಬುದು ಸ್ಪಷ್ಟವಾಗುವದು.



## D13 ವರ್ಧಂತಿ

ಇನ್ನು ಸಾಲುಗಳ ಸಂಖ್ಯೆಯು ಒಂದರಿಂದ ಮತ್ತೊಂದಕ್ಕೆ ಹೆಚ್ಚದೆ ಸರಿಯಾಗಿರುವ ಪ್ರಸಂಗಗಳಲ್ಲಿ ಭಿನ್ನತೆಯನ್ನು ಕಂಡುಕೊಳ್ಳಬೇಕಾದರೆ ಒಂದು ಸಾಲಿನ ಅಂತ್ಯಪದವನ್ನು ಮತ್ತೊಂದರ ಕೂಡ ಹೋಲಿಸಿ ನೋಡಬಹುದು. ೨೬೩ ನೆಯ ವಚನದ ೪ನೆ ಸಾಲಿನ ಕೊನೆಯ ಶಬ್ದವು 'ಸಂಬಂಧಿಯಾದಾತನ' ಎಂಬುದು ಇದ್ದರೆ ಅದೇ ವಚನವು ೩೯೩ ನೆಯ ವಚನ ಸಂಖ್ಯೆಯಲ್ಲಿ ಪ್ರಕಟ

ವಾದಾಗ ೪ನೆ ಸಾಲು ' ಪ್ರಸಾದಿ ಕಾಣಾ ' ಎಂಬ ಶಬ್ದಗಳಿಂದ ಕೊನೆಗೊಳ್ಳುತ್ತದೆ. ಇದರಂತೆಯೆ ವಚನ ೧೦೨ ಪುನರಾವೃತ್ತವಾಗಿ ೩೭೭ ಸಂಖ್ಯೆಯಲ್ಲಿ ಪ್ರಕಟವಾಗಿದೆ. ಮೊದಲನೆಯದರಲ್ಲಿ ೨, ೩ ಸಾಲುಗಳು 'ಸಂಗವ' 'ಪರಧನ-ದಾಮಿಷ' ಈ ಪದಗಳಿಂದ ಅಂತ್ಯವಾಗಿದ್ದರೆ ಎರಡನೆಯದರಲ್ಲಿ ಅವೇ ಸಾಲುಗಳು ' ತೊರೆಯಿಂಬೊ ', ' ತೊರೆಯಿಂಬೊ ' ಪದಗಳಿಂದ ಕೊನೆಗಾಣುತ್ತವೆ. ಇನ್ನು ೧೩೨, ೪೬೨ ಸಂಖ್ಯೆಗಳಲ್ಲಿ ಪ್ರಕಟವಾದ ವಚನವನ್ನು ಪರಿಶೀಲಿಸಿದರೆ ಒಂದರಲ್ಲಿ ೩ನೆ ಸಾಲು 'ಸ್ವತಃಸಿದ್ಧನಾಗಿಪ್ಪ' ಎಂಬುದರಿಂದ ಅಂತ್ಯವಾಗಿದ್ದರೆ ಮತ್ತೊಂದರಲ್ಲಿ ಅದು ' ಮಧ್ಯದಲ್ಲಿ ' ಎಂಬುದರಿಂದ ಮುಗಿದಿದೆ.

## D14 ನ ತು ಜ್ಞಾನಂ

ಈ ಪರಿಶೀಲನೆಯಿಂದ ಲಿಂ. ಬಸವನಾಳರು ' ಲಯ ' ವೆಂಬುದಾಗಿ ವಚನಗಳ ಸಾಲುಗಳನ್ನು ಪದ್ಯದ ಪಾದಗಳಂತೆ ಪರಿವರ್ತಿಸಿದುದನ್ನು ಯುಕ್ತವಾಗಿ ಸಾಧಿಸದೆ ತೋರಿಕೆಗಾಗಿ ಸಾಲುಗಳನ್ನು ತುಂಡರಿಸಿದುದು ಅಪಹಾಸ್ಯಕರವಾಗಿದೆ ಎಂಬುದು ಸ್ಪಷ್ಟವಾಗುವದು. ಇಲ್ಲಿ ಮುಕ್ತಿಕಂಠಾಭರಣ ಗ್ರಂಥದಲ್ಲಿ ಪುನರಾವೃತ್ತವಾದ ವಚನಗಳ ತುಲನೆಯಿಂದ ಹೇಳಿದುದನ್ನು ಅವೇ ವಚನಗಳು ಕ. ವಿ. ವಿ. ಇತರ ಪ್ರಕಟನೆಗಳಲ್ಲಿ (ಬಸವಣ್ಣ, ಚನ್ನಬಸವಣ್ಣ, ಸಿದ್ಧರಾಮ ಮುಂತಾದವರ ವಚನಗಳು) ಪ್ರಸಿದ್ಧವಾದವುಗಳೊಡನೆ ತುಲನೆ ಮಾಡಿ ಸಿದ್ಧ ಮಾಡಬಹುದು. ಇದರಿಂದ ಸಂಪಾದಕರು ಒಂದು ನಿರ್ದಿಷ್ಟ ನಿಶ್ಚಿತ ಸಾಧುವಾದ ಕ್ರಮವನ್ನು ಅನುಸರಿಸುವ ಮತ್ತು ಪ್ರಸ್ಥಾಪಿಸುವ ವಿಚಾರಕ್ಕಿಂತ ವಚನಗಳ ಸಾಲುಗಳನ್ನು ಹೆಚ್ಚಿಸುವುದಕ್ಕೆ—ಅಂದರೆ ಗ್ರಂಥಗಾತ್ರವನ್ನು ಹೆಚ್ಚಿಸುವುದಕ್ಕೆ-ಮೊರೆ ಹೋಗಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ಇದರಿಂದ ' ಗಾತ್ರಾಣಿ ವರ್ಧಂತೇ ನ ತು ಜ್ಞಾನಂ ' ಎಂಬ ಆರ್ಯೋಕ್ತಿಯು ನೆನಪಾಗುತ್ತದೆ.

## D೩ ವಿರಾಮ ಚಿನ್ಹ

ಕನ್ನಡ ಭಾಷೆಗೆ ವಿರಾಮ ಚಿನ್ಹಗಳು ಅವಶ್ಯವಿಲ್ಲ. ಪೂರ್ವದಲ್ಲಿ ಅವು ಬಳಕೆಯಲ್ಲಿರಲಿಲ್ಲ. ಆದರೆ ತೀರ ಇತ್ತೀಚಿಗೆ ಇಂಗ್ಲೀಷ ಭಾಷೆಯ ಪ್ರಭಾವ ಪ್ರಚಾರಗಳಿಂದಾಗಿ ಕನ್ನಡದಲ್ಲಿಯೂ ವಿರಾಮ ಚಿನ್ಹಗಳನ್ನು ಬಳಸಲಾಗುತ್ತದೆ.

ಇಂಗ್ಲೀಷ ಭಾಷೆಯಲ್ಲಿ ಪ್ರಚಲಿತವಿರುವ ಅಲ್ಪವಿರಾಮ, ಅರ್ಧವಿರಾಮ; ಕೋಲನ್ : ಪೂರ್ಣವಿರಾಮ. ಉದ್ಗಾರವಾಚಕ! ಪ್ರಶ್ನಾರ್ಥಕ? ಚಿನ್ಹಗಳನ್ನು ಕನ್ನಡದಲ್ಲಿಯೂ ಬಳಸಲಾಗುತ್ತದೆ. ಈ ಚಿನ್ಹಗಳು ಅವಶ್ಯವಾಗಿವೆಯೆಂದೇನೂ ಅಲ್ಲ. ಆದರೆ ಇಂಗ್ಲೀಷ ಭಾಷೆಯ ಅಭ್ಯಾಸಿಗರು ಇಂಗ್ಲೀಷ ಭಾಷೆಯಲ್ಲಿಯಂತೆ ಕನ್ನಡದಲ್ಲಿಯೂ ವಿರಾಮಚಿನ್ಹಗಳನ್ನು ಬಳಸುವುದನ್ನು ರೂಢಿಗೊಳಿಸಿದ್ದಾರೆ. ಆದುದರಿಂದ ಕನ್ನಡದಲ್ಲಿಯೂ ವಿರಾಮ ಚಿನ್ಹಗಳನ್ನು ಬಳಸುವುದು ಸ್ವಾಭಾವಿಕವಾಗಿ ಹಾಗು ಸಹಜವಾಗಿ ಬಿಟ್ಟಿದೆ. ವಚನಗಳ ಸಂಪಾದನೆಯಲ್ಲಿ ಲಿಂ. ಬಸವನಾಳರು ವಿರಾಮಚಿನ್ಹಗಳನ್ನು ಬಳಸಿದ್ದಾರೆ, ಹಾಗು ಅವುಗಳ ಬಳಕೆಯನ್ನು ಪ್ರತಿಪಾದಿಸಿದ್ದಾರೆ. ಆದರೆ "ವಿರಾಮ ಚಿನ್ಹಗಳನ್ನು ಬಳಸುವಲ್ಲಿ ಒಂದು ಕ್ರಮ ಬೇಕು, ವಿಶೇಷ ಜಾಗ್ರತಿಯೂ ಬೇಕು– ಎಂದು ಬೇರೆ ಹೇಳಬೇಕಾಗಿಲ್ಲ" ಎಂದು ಘಟ್ಟಿಸಿ ಹೇಳಿದ್ದಾರೆ.

## D21 ತಪ್ಪು ದೋಷಗಳು

ಈ ಬಗೆಯಿಂದ ಮುಕ್ತಿಕಂಠಾಭರಣದಲ್ಲಿ ವಿರಾಮ ಚಿನ್ಹಗಳನ್ನು ಬಳಸಿದುದನ್ನು ಪರಿಶೀಲಿಸಿ ನೋಡಿದಾಗ ಅದರಲ್ಲಿ ಯಾವ ಕ್ರಮವೂ ದಕ್ಷತೆಯೂ ಗೊತ್ತುಗುರಿಯೂ ಇಲ್ಲವೆಂಬುದು ಖಂಡಿತವಾಗುತ್ತದೆ. ಅವುಗಳ ಬಳಕೆಯು ಯದ್ವಾತದ್ವಾ ಆಗಿದೆ. ಅದು ಅರಿಯದವರನ್ನು ಮರುಳು (Tom foolery) ಗೊಳಿಸುವ ಮಾಟವಾಗಿದೆ ಎಂದು ಹೇಳದೆ ಗತ್ಯಂತರವಿಲ್ಲ. ಹೀಗೆ ಹೇಳುವುದಕ್ಕೆ ನಮ್ಮದಾದ ಒರೆಗಲ್ಲನ್ನು ಬಳಸಿಲ್ಲ. ಸಂಪಾದಕರ ಒರೆಗಲ್ಲಿನಲ್ಲಿಯೆ ಪ್ರಮಾಣಿಸಿ ತೋರಿಸಲಾಗಿದೆ. ಅವರದೇ ಆದ ಒರೆಗಲ್ಲು ಕೆಲವು ವಚನಗಳ ಪುನರುಕ್ತಿಯಿಂದ ಮತ್ತು ಈ ಸಂಕಲಿತ ವಚನಗಳ ಮೂಲ (ಕ. ವಿ. ವಿ. ದವರು ಪ್ರಕಟಿಸಿದ) ಆಧಾರಗಳಿಂದ ಲಭಿಸಿದೆ. ಕಾರಣ ಇಲ್ಲಿ ಹೇಳಿದುದಕ್ಕೆ ಸಂಪಾದಕರು ಪ್ರತಿಹೇಳಲಾರರು, ತಾವು ಮಾಡಿದುದನ್ನು ಸಮರ್ಥಿಸಿಕೊಳ್ಳಲಾರರು; ತಮ್ಮ ತಪ್ಪನ್ನು ಅದಕ್ಷತೆಯನ್ನು ಒಪ್ಪಿಕೊಳ್ಳಲೇ ಬೇಕಾಗುತ್ತದೆ. ಇದಕ್ಕಾಗಿ ಈ ಕೆಲವು ಉದಾಹರಣೆಗಳನ್ನು ನಿದರ್ಶಿಸಲಾಗಿದೆ.

(ವಚನಗಳನ್ನು ಪೂರ್ತಿಯಾಗಿ ಉದ್ಧರಿಸದೆ ವಿರಾಮ ಚಿನ್ಹಗಳ ನಿದರ್ಶನಾರ್ಥವಾಗಿ ಮಾತ್ರ ಸಂಕ್ಷೇಪವಾಗಿ ಹೇಳಲಾಗಿದೆ. ಇದರಿಂದ ಭಂಗವೇನೂ ಉಂಟಾಗಿಲ್ಲ)

| ಸಂ. | ವಚನ ಸಂಖ್ಯೆ | ವಾಕ್ಯ | ಚಿನ್ಹಗಳ ಬಳಕೆ | ಸಂ. | ವಚನ ಸಂಖ್ಯೆ | ವಾಕ್ಯ | ಚಿನ್ಹಗಳ ಬಳಕೆ |
|---|---|---|---|---|---|---|---|
| (೧) | ೨೬೬ | ೧ | .... ಲಿಂಗ, | (೧) | ೩೯೪ | ೧ | .... ಲಿಂಗ; |
| | | ೨ | ... ಜಂಗಮ, | | | ೨ | .... ಜಂಗಮ; |
| | | ೩ | ... ಪ್ರಸಾದ. | | | ೩ | .... ಪ್ರಸಾದ; |
| | | ೪ | ....ಗುಹೇಶ್ವರ,...ಸುಖಿ! | | | ೪ | ... ಗುಹೇಶ್ವರ, |
| | | | | | | ೫ | .... ಸುಖಿ. |
| (೨) | ೧೩೭ | ೧ | ... ತಾಳುವೆ, | (೨) | ೪೬೫ | ೧ | .... ತಾಳುವೆ, |
| | | ೨ | ... ತಾಳುವೆ. | | | ೨ | ... ತಾಳುವೆ. |
| | | ೩ | ... ತಾಳಿದೆನಾದಡೆ, | | | ೩ | ... ತಾಳಿದೆನಾದಡೆ, |
| | | ೪ | .... ಹೋಕು, | | | ೪ | ... ಹೋಕು |
| | | | ... ಸಂಗಮದೇವಾ! | | | | ... ಸಂಗಮದೇವಾ. |
| (೩) | ೧೩೮ | ೧ | ... ಬಾರದಯ್ಯ, | (೩) | ೪೬೬ | ೧ | .... ಬಾರದಯ್ಯಾ; |
| | | ೨ | ... ಬಾರದಯ್ಯ! | | | ೨ | .... ಬಾರದಯ್ಯಾ. |
| | | ೩ | .... ಸಂಗಮದೇವಾ, | | | ೩ | ... ಸಂಗಮದೇವಾ, ...ಬದುಕುವೆ ? |
| | | ೪ | ....ಬದುಕುವೆನು! | | | | |
| (೪) | ೧೦೦ | ೧ | .... ಹೋದಡೆ, | (೪) | ೫೪೬ | ೧ | .... ಹೋದಡೆ, |
| | | ೨ | ... ಕಾಣಿರಣ್ಣಾ! | | | ೨ | .... ಕಾಣಿರಣ್ಣಾ. |
| | | ೩ | ... ಸರಸಬೇಡ! | | | ೩ | .... ಸರಸಬೇಡ, |
| | | ೪ | .... ಕರಸಿತಗನಯ್ಯಾ! | | | ೪ | .... ಕರಸಿತಗನಯ್ಯ. |
| (೫) | ೨೫೭ | ೧ | ....ಕುಡಿಯುತ್ತಿರ್ದರಯ್ಯಾ. | (೫) | ೩೫೪ | ೧ | ..ಕುಡಿವುತ್ತಿರ್ದರಯ್ಯಾ |
| | | ೨ | ... ನರಿಯುದೆ, | | | ೨ | .... ನರಿಯುದೆ. |
| | | ೩ | ... ಗುಹೇಶ್ವರಾ! | | | ೩ | .... ತೈದಾರೆ [ಗುಹೇಶ್ವರ] |

ಇದೇ ರೀತಿಯಾಗಿ ಪುನರುಕ್ತಿಯಾದ ಹದಿನೈದು ಪ್ರಸಂಗಗಳನ್ನು ಎತ್ತಿ ಹೇಳ ಬಹುದಾದರೂ ವಿಸ್ತಾರ ಭಯದಿಂದ ಹಾಗೆ ಮಾಡಿಲ್ಲ. ಇವು ಅದೇ ಪುಸ್ತಕಾಂತರ್ಗತ ವಚನಗಳನ್ನು ಉದಹರಿಸಿ ಹೇಳಿದುವಾದರೆ, ಒಂದನ್ನು ಬಾಹ್ಯ ಮೂಲದಿಂದ(ಅಂದರೆ ಕ. ವಿ. ವಿ. ಯದ ಚನ್ನಬಸವಣ್ಣನವರ ವಚನ ಸಂಗ್ರಹದಿಂದ) ಎತ್ತಿ ಹೇಳುವುದು ಉದ್ಬೋಧಕವಾಗಿದೆ.

(೬) ೧೫೨ (ಪುುಕ್ತಿ)
೧ ... ಲಾಗದು,
೨ .... ಲಾಗದು,
೩ .... ಲಾಗದು,
೪ ... ಲಾಗದು.
೫ ... ಇದು ಕಾರಣ:
೬ ....ಸಂಗಯ್ಯ, ನೀ ಸಾಕ್ಷಿಯಾಗಿ,
೭ ....ಶರಣರು.

(೬) ೩೭೬ (ಚ.ಬ)
೧ ... ಲಾಗದು;
೨ .... ಲಾಗದು;
೩ .... ಲಾಗದು;
೪ — ಲಾಗದು;
೫ ...ಇದು ಕಾರಣ,
ಕೂಡಲಚನ್ನಸಂಗಯ್ಯಾ,
೬ ನೀ ಸಾಕ್ಷಿಯಾಗಿ,
... ದವರ ಶರಣರು.

---

ಇದೇ ರೀತಿಯಾಗಿ ಚನ್ನಬಸವಣ್ಣನವರ ಪ್ರಮಾಣಿತ ೧೪ ವಚನಗಳನ್ನು ಎತ್ತಿ ಹೇಳಿ ವಿರಾಮ ಚಿನ್ಹಗಳ ಭೇದವನ್ನು ತೋರಿಸಬಹುದಾದರೂ ಒಂದೇ ಉದಾಹರಣೆಯು ಸಾಕಾಗಿದೆ.

ಒಂದೇ ವಚನವು ಬೇರೆ ಬೇರೆ ಕಡೆಗೆ ಬಂದಿರುವುದನ್ನು ಮತ್ತು ಅವುಗಳಿಗೆ ಭಿನ್ನ ಭಿನ್ನ ವಿರಾಮ ಚಿನ್ಹಗಳನ್ನು ಹಾಕಿರುವುದನ್ನು ಸ್ಪಷ್ಟವಾಗಿ ನಿದರ್ಶಿಸಲು ಒಂದರ ಮುಂದೆ ಒಂದನ್ನು ಅದೇ ಅನುಕ್ರಮಾಂಕಗಳನ್ನು ಹಾಕಿ ಕೊಡಲಾಗಿದೆ. ಇದರಿಂದ ವೈಷಮ್ಯತೆಯು ಸ್ಪಷ್ಟವಾಗಿ ಕಂಡುಬರುವುದು. ಇದಕ್ಕೇನೂ ವಿವರಣೆ ಬೇಕಾಗಿಲ್ಲ. ಅವುಗಳು ಸಂಪಾದಕರ ಅಲಕ್ಷ್ಯವನ್ನು ಅದಕ್ಷತೆಯನ್ನು ಅವಿಚಾರ ವನ್ನು ನಿದರ್ಶಿಸುತ್ತವೆ. ಹೀಗೆ ವಿರಾಮ ಚಿನ್ಹಗಳನ್ನು ಯದ್ವಾ ತದ್ವಾ ಹಾಕಿರುವಲ್ಲಿ ಅಚ್ಚಿನ ದೋಷವೆಂಬ ಸಮಾಧಾನವನ್ನು ಸಂಪಾದಕರು ಹೇಳ ಲಾರರು, ಎಂದು ಭಾವಿಸಿರುವೆ. ಒಂದು ವೇಳೆ ಹಾಗೆ ಹೇಳಿದುದಾದರೆ ನಗೆ-ಪಾಟಲಿಗೆ ಗುರಿಯಾಗುವರು. ಈ ರೀತಿಯಾಗಿ ವಿರಾಮ ಚಿನ್ಹಗಳನ್ನು

ಹಾಕಿರುವಲ್ಲಿ ಸಂಪಾದಕರಿಗೆ ವಿರಾಮ ಚಿನ್ಹಗಳ ಮಹತ್ವದ ಅರಿವು ಇಲ್ಲವೆಂದು ಭಾಸವಾಗುತ್ತದೆ. ಅಲ್ಲದೆ ಇದರಲ್ಲಿ ರೀತಿ ನೀತಿ ಗೊತ್ತು ಗುರಿಯಿಲ್ಲವೆಂದು ಹೊಳೆಯುತ್ತದೆ; ಮತ್ತು ವಿರಾಮ ಚಿನ್ಹಗಳು ನಿರರ್ಥಕ ಹಾಗು ಅನರ್ಥಕ (ತೋರಿಕೆಗೆ ಮಾತ್ರ) ಎಂಬ ಭಾವನೆಯನ್ನು ಹುಟ್ಟಿಸುತ್ತವೆ.

## D3 ವೈಕಟ್ಟು

ಮುದ್ರಣವು ಅಂದವಾಗಿರಬೇಕು ಓರಣವಾಗಿರಬೇಕು ಎಂಬುದು ಸಾಮಾನ್ಯ ನಿಯಮ. ಅದರಂತೆಯೇ ಅರ್ಥಪೂರ್ಣವಾಗಿರಬೇಕೆಂಬುದು ಸಾಮಾನ್ಯ ಗ್ರಹಿಕೆ. ಹೀಗೆ ಮಾಡುವುದಕ್ಕಾಗಿ indention ಒಳಪಾಡನ್ನು—ಅಂದರೆ ಆರಂಭದ ಸಾಲುಗಳನ್ನು ಇಲ್ಲವೆ ಮುಂದಿನ ಸಾಲುಗಳನ್ನು ಮಾರ್ಜಿನ ದಿಂದ ಒಳಗೆ ಸೇರಿಸುವುದು—ಕಲ್ಪಿಸುವುದು ಆಗಿದೆ. ಇದು ವಚನಗಳ ವೈಕಟ್ಟಿಗೆ ಸಂಬಂಧಿಸಿದ ವಿಷಯವೆಂದುಕೊಳ್ಳಬಹುದು. ಲಿಂ. ಬಸವನಾಳರು ತಾವು ಸಂಪಾದಿಸಿದ ಬಸವಣ್ಣನವರ ಷಟ್‌ಸ್ಥಲದ ವಚನಗಳ ವೈಕಟ್ಟಿನ ಹಾಗು ಸಾಲುಗಳ ವಿನ್ಯಾಸದ ಬಗ್ಗೆ ಹೇಳಿದುದು ಗಮನೀಯವಾಗಿದೆ. "ವಾಕ್ಯಾರಂಭದ ಸಾಲನ್ನು ಉಳಿದ ಸಾಲುಗಳಿಗಿಂತ ಸ್ವಲ್ಪ ಎಡಗಡೆಗೆ ಮುಂಚಾಚುವಂತೆ ಅಚ್ಚುಮಾಡಿದೆ" ಎಂದಿದ್ದಾರೆ. ಈ ವಿಧಾನದಿಂದ ಮತ್ತು ವಚನದಲ್ಲಿ ಪಾದಗಳನ್ನು ಕಲ್ಪಿಸುವುದರಿಂದ ಬಸವನಾಳರು ಲಯುವನ್ನು ತೋರಿಸಿದ್ದಾರೆ. ಹೀಗೆ ಮಾಡುವಾಗ ಒಳಸೇರಿರುವ ಸಾಲುಗಳು ಪ್ರಾರಂಭದ ಸಾಲಿಗಿಂತ ೨M ($\frac{1}{8}$ ಇಂಚು) ದಷ್ಟು ಅಂತರವನ್ನು ಹೊಂದಿವೆ.

## D31 ಅನುಕರಣೆ

ಬಸವನಾಳರು ಹೇಳಿದುದನ್ನು ಮಾಡಿದುದನ್ನು ಅನುಸರಿಸಿ ವಚನಗಳ ವೈಕಟ್ಟನ್ನು ಸಾಲುಗಳ ವಿನ್ಯಾಸವನ್ನು ಕರ್ನಾಟಕ ವಚನ ವಾಙ್ಮಯ ಪ್ರಕಟನೆಗಳಲ್ಲಿ ಮಾಡಹೊರಟಿದ್ದಾರೆ. ಆದರೆ ಮುಕ್ತಿಕಂಠಾಭರಣದಲ್ಲಿ ಹೀಗೆ ಮಾಡಿದುದು ಅರ್ಥಹೀನವಾಗಿದೆ, ವಿಚಾರಹೀನವಾಗಿದೆ. ಉದಾಹರಣಾರ್ಥವಾಗಿ ವಚನ ೨೬೭ನ್ನು ಅವಲೋಕಿಸಿದಾಗ ಮತ್ತು ಅದೇ ಪುನಃ ೩೯೫ ಸಂಖ್ಯೆಯಲ್ಲಿ ಪ್ರಕಟವಾಗಿರುವಾಗ ಅವುಗಳಲ್ಲಿಯ ಪರಸ್ಪರ ಭಿನ್ನತೆಯು ಇದರ

ಸ್ಪಷ್ಟ ನಿದರ್ಶನವನ್ನು ಕೊಡುತ್ತದೆ. ೩೯೫ ರಲ್ಲಿ ಆ ವಚನವು ೯ ಸಾಲುಗಳಾಗಿದ್ದರೆ ೨೬೭ ರಲ್ಲಿ ೧೧ ಸಾಲಾಗಿದೆ; ಇದಕ್ಕೆ ಕಾರಣವೆಂದರೆ ಒಳಸೇರಿರುವ ಸಾಲುಗಳಲ್ಲಿ ಮಾರ್ಜಿನದಿಂದ ಹೆಚ್ಚು ಸ್ಥಳವನ್ನು ಬಿಟ್ಟಿರುವುದು. ೩೯೫ ರಲ್ಲಿ ೪ ಸಾಲುಗಳು ಪ್ರತಿಯೊಂದು ೪M ದಷ್ಟು ಒಳಸೇರಿದ್ದರೆ, ಒಂದು ಸಾಲು ೧೩M ದಷ್ಟು ಒಳಸೇರಿದೆ. ೨೬೭ರಲ್ಲಿ ೬ ಸಾಲುಗಳು ೬ Mದಷ್ಟು ಒಳಸೇರಿವೆ, ಮತ್ತು ಒಂದು ಸಾಲು ೧೪ Mದಷ್ಟು ಒಳಸೇರಿದೆ. ಇದರಿಂದ ಸಾಲುಗಳ ಒಳಸೇರಿಸುವ ವಿಧಾನದಿಂದ ವಚನದಲ್ಲಿಯ ಲಯವನ್ನು ಸೂಚಿಸುವುದನ್ನು ವಿಚಾರಪೂರ್ವಕವಾಗಿ ಮಾಡಿರದೆ ಏನೋ ಎಂತೋ—ಅಂತೂ ವಿಶೇಷ ಸ್ಥಳವನ್ನು ಆಕ್ರಮಿಸುವ ವೃತ್ತಿಯಿಂದ—ಎಂಬಂತೆ ಮಾಡಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

## D32 ಓರಣ

ಇನ್ನು ಒಂದು ಪುಟದಲ್ಲಿಯ ಒಳಪಾಡನ್ನು (indention) ನೋಡಿದರೆ ಈ ಬಗ್ಗೆ ವಿಶೇಷ ಬೆಳಕು ಬೀರುವುದು. ಈ ಸಂಬಂಧವಾಗಿ ಪುಟ ೧೫೩ನ್ನು ನೋಡಬಹುದು. ಇದರಲ್ಲಿ ೨ ವಚನಗಳಲ್ಲಿಯ ೨೦ ಸಾಲುಗಳಲ್ಲಿಯ ೧೨ ಸಾಲುಗಳನ್ನು 4 M ಒಳಪಾಡಿನಿಂದ ಮುದ್ರಿಸಲಾಗಿದೆ. ಒಂದನ್ನು 2 M ಒಳಪಾಡಿನಿಂದ ಅಚ್ಚು ಹಾಕಿಸಲಾಗಿದೆಯೆಂಬುದು ಕಂಡುಬರುವುದು. ಇದಕ್ಕೆ ಪ್ರತಿಯಾಗಿ ಪುಟ ೩೨ ನೋಡಬಹುದು. ಇದರಲ್ಲಿ ೩ ವಚನಗಳ ೨೪ ಸಾಲುಗಳಿದ್ದರೆ ಅವರಲ್ಲಿಯ ೧೩ ಸಾಲುಗಳು 2 M ಒಳಪಾಡಿನಲ್ಲಿ ಇವೆ. ೨ ಸಾಲು 4 M ಸ್ಥಳದಷ್ಟು ಒಳಪಾಡಿನಲ್ಲಿವೆ. ಇದರಿಂದ ಮುದ್ರಣದ ಓರಣವನ್ನು ಅಂದವನ್ನು ಲಕ್ಷಗೊಡದೆ ಮನಬಂದಂತೆ ಅಚ್ಚು ಹಾಕಿಸಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ; ಮತ್ತು ವಚನಗಳನ್ನು ಪದ್ಯದಲ್ಲಿಯ ಪಾದಗಳಂತೆ ತುಂಡರಿಸಿರುವುದು ಲಯವನ್ನು ಸಾಧಿಸುವುದಕ್ಕಾಗಿ ಅಲ್ಲ. ಮುದ್ರಣದ ಓರಣಕ್ಕಾಗಿ ಅಲ್ಲ. ಅದು ಕುರುಡನು ಹಗ್ಗ ಹೊಸೆದಂತೆ ಆಗಿದೆ ಎಂದರೆ ತಪ್ಪಾಗಲಿಕ್ಕಿಲ್ಲ.

## D4 ಪಾಠಶುದ್ಧಿ

ಯಾವುದೊಂದು ಗ್ರಂಥಸಂಪಾದನಾ ಕಾರ್ಯದಲ್ಲಿ ಪಾಠಶುದ್ಧಿಯನ್ನು ನೋಡಿಕೊಳ್ಳುವುದು ಹಾಗು ಮಾಡುವುದು ಅತ್ಯಂತ ಮಹತ್ವದ್ದಾಗಿದೆ. ಅದು ಸಂಪಾದಕರ ಮುಖ್ಯ ಕಾರ್ಯ. ಅದರ ಮೇಲೆ ಗ್ರಂಥದ ಅವಗಾಹನೆಯು

ಮತ್ತು ಉಪಯುಕ್ತತೆಯು ಅವಲಂಬಿಸಿರುತ್ತದೆ. ದೊರೆತ ಹಸ್ತಪ್ರತಿಗಳಲ್ಲಿ ಎರಡು ಬಗೆಯಿಂದಾಗಿ (೧) ಮೂಲ ಬರಹದಲ್ಲಿ (೨) ನಂತರ ಪ್ರತಿ ಮಾಡುವಲ್ಲಿ, ದೋಷಗಳು ಉಂಟಾಗಿರಬಹುದು. ಮೂಲ ಗ್ರಂಥವಾವುದು ನಂತರದಲ್ಲಿ ಪ್ರತಿ ಮಾಡಿದುದು ಯಾವುದು ಎಂಬುದನ್ನು ನಿಶ್ಚಯಿಸುವುದು ದುಸ್ತರವಾಗಿರುವ ಕಾರಣ, ಪ್ರತಿ ಮಾಡುವಲ್ಲಿ ಉಂಟಾದ ದೋಷಗಳೆಂದೇ ಭಾವಿಸಲಾಗುತ್ತದೆ. ಏನೇ ಆದರೂ ದೋಷಗಳು ದೋಷಗಳೇ. ಅವುಗಳನ್ನು ತಿದ್ದುವುದು ಮಹತ್ವದ್ದು ಹಾಗು ಅವಶ್ಯವಾದುದು, ಅಂತೆಯೇ ಸಂಪಾದಕರ ಕರ್ತವ್ಯವೂ ಆಗಿದೆ.

## D41 ಉದ್ದೇಶ

ಪಾಠಶುದ್ಧಿಯನ್ನು ಮಾಡುವಲ್ಲಿ ಸಂಪಾದಕನ ಹಸ್ತಕ್ಷೇಪವಿರದೆ ಕೇವಲ ಓದುಗರಿಗೆ ಗ್ರಂಥವು ಅಭ್ಯಾಸ ಸುಲಭವಾಗಬೇಕು, ಸುಗಮವಾಗಬೇಕು, ಗ್ರಂಥಕರ್ತನ ಉದ್ದಿಷ್ಟ ಅರ್ಥ ಭಾವಗಳು ಶ್ರುತವಾಗಬೇಕು ಅಂತೆಯೇ ದೋಷಗಳಿರಬಾರದು ಎಂಬುದಾಗಿದೆ. ಹೀಗೆ ಮಾಡುವಲ್ಲಿ ಅದೇ ಗ್ರಂಥದ ಬೇರೆ ಪ್ರತಿಗಳು ಲಭ್ಯವಾಗಿದ್ದರೆ ಅವುಗಳ ತುಲನಾತ್ಮಕ ಅಭ್ಯಾಸದಿಂದ ಸರಿಯಾದ ಪಾಠಗಳನ್ನು ಒದಗಿಸುವರು, ಮತ್ತು ಪಾಠಾಂತರಗಳನ್ನು ಭಿನ್ನ ಪಾಠಗಳನ್ನು ಸಂಪಾದಕರು ಟಿಪ್ಪಣಿಯಲ್ಲಿ ತೋರಿಸುವರು. ಹೀಗೆ ಸುಗಮ ಪಾಠಗಳನ್ನು ನಿದರ್ಶಿಸಲಿಕ್ಕೆ ಎರಡು ಬಗೆಯ ಮಾರ್ಗಗಳನ್ನು ಅನುಸರಿಸುವರು. —(೧) ಪಠ್ಯಭಾಗದಲ್ಲಿಯೇ ಚೌಕ ಕಂಸಿನಲ್ಲಿ ನಿದರ್ಶಿಸುವ ಮೂಲಕ (೨) ಆ ಆ ಭಾಗದ ಕೆಳಗೆ ಇಲ್ಲವೆ ಪುಟದ ಅಡಿಯಲ್ಲಿ ಟಿಪ್ಪಣಿಗಳಾಗಿ ನಮೂದಿಸುವ ಮೂಲಕ. ಈ ಬಗೆಯಾದ ಗ್ರಂಥ ಸಂಪಾದನಕ್ಕೆ ಅದೇ ಪುಸ್ತಕದ ಬೇರೆ ಪ್ರತಿಗಳು ಲಭ್ಯವಾಗಲೇ ಬೇಕೆಂಬುದೇನೂ ಇಲ್ಲ. ಒಂದೇ ಪ್ರತಿಯಿದ್ದರೂ ಅದರಲ್ಲಿಯ ಪಾಠದೋಷಗಳು ಸ್ವಯಂ ಸ್ಪಷ್ಟವಿದ್ದರೆ ಅವುಗಳನ್ನು ತಿದ್ದಿ ಇವೆರಡು ವಿಧಾನಗಳಿಂದ ಹೇಳಬೇಕಾಗುವದು. ಇಲ್ಲದಿದ್ದರೆ ಸಂಪಾದಕರು ಕರ್ತವ್ಯಚ್ಯುತಿಯ ದೂಷಣೆಗೆ ಗುರಿಯಾಗುವರು. ಉದಾ.—ಮುಕ್ತಿಕಂಠಾಭರಣ ಗ್ರಂಥದಲ್ಲಿಯ ವಚನ IV ೧೪೯ ನೋಡಬಹುದು. ಇದರಲ್ಲಿ " ಅಂದೆ ಲಗ್ನವಾಗಿ, ಅಂದೆ ರತಿಯಾಗಿ, ಅಂದೆ ಪತಿವ್ರತೆಯಾದ ದರಿದ್ರನಾರಿಯ ತೆರನಾಯಿತ್ತೆನ್ನ ಮನ " ಇದೆ. ಇದರಲ್ಲಿ ಪತಿವ್ರತೆ ದರಿದ್ರನಾರಿ ಎಂಬಿವು

ಪರಸ್ಪರ ವಿರೋಧ ಭಾವವನ್ನು ವ್ಯಕ್ತಪಡಿಸುತ್ತವೆ. ಆದುದರಿಂದ ಮೊದಲನೆಯ ಪದವು 'ಪತಿವ್ರತೆ'ಯಾಗಿರದೆ 'ಪತಿಮೃತೆ' ಎಂಬುದು ಹೊಳೆಯುತ್ತದೆ. ಇದನ್ನು ಮುಂದಿನ ಉದಾಹರಣೆಯು "ಅಂದೆ ಮಗನ ಮೃತಿಯಾವರಸನ ಮನ" ಎಂಬುದು ದೃಢಪಡಿಸುತ್ತದೆ. ಇದಲ್ಲದೆ ಸಿದ್ಧರಾಮನ ವಚನ ಸಂಗ್ರಹದಲ್ಲಿಯು ಇದೇ ವಚನವನ್ನು ಪರಿಶೀಲಿಸಲಾಗಿ ಅಲ್ಲಿ 'ಪತಿಮೃತೆ' ಪಾಠವು ಕಂಡುಬರುವುದು. ಆದುದರಿಂದ ಇಲ್ಲಿ ಸಂಪಾದಕರು ತಮ್ಮ ಅಲಕ್ಷತೆಯಿಂದ ಅದಕ್ಷತೆಯಿಂದ ಪಾಠಶುದ್ಧೀಕರಣ ಮಾಡಿಲ್ಲವೆಂದು ಸಿದ್ಧವಾಗುತ್ತದೆ. ಆದಾಗ್ಯೂ ಪ್ರಸ್ತಾವನೆ ಪುಟ ೧೬ ರಲ್ಲಿ "ಗ್ರಂಥ ಸಂಸ್ಕರಣ ತತ್ವಗಳ ಮರ್ಯಾದೆಯಲ್ಲಿಯೇ ಇದರ ಪರಿಷ್ಕರಣ ಕಾರ್ಯವನ್ನು ಮಾಡಲಾಗಿದೆ" ಎಂದು ಹೇಳಿದ್ದಾರೆ. ಆದರೆ ಇದು ಬರಡು ಹೇಳಿಕೆಯಾಗಿದೆ ಹೊರತು ಇದಕ್ಕೆ ಸಮರ್ಥನೆ ದೊರಕುವುದಿಲ್ಲ.

## D42 ಕರ್ತವ್ಯಚ್ಯುತಿ

ಆದುದರಿಂದ ಮುಕ್ತಿಕಂಠಾಭರಣ ಗ್ರಂಥ ಸಂಪಾದಕರು ತಮ್ಮ ಕಾರ್ಯದಲ್ಲಿ ಪಾಠಶುದ್ಧೀಕರಣವನ್ನೇನೂ ಮಾಡದೆ ಕರ್ತವ್ಯಚ್ಯುತಿಯ ದೂಷಣೆಗೆ ಗುರಿಯಾಗಿರುವರೆಂಬುದನ್ನು ಮೇಲಿನ ಉದಾಹರಣೆಯಲ್ಲದೆ ಈ ಕೆಳಗಿನವು ಸಹ ದೃಢಪಡಿಸುವವು. ಹೀಗೆ ದೃಢಪಡಿಸುವಾಗ ಮೊದಲು ಇದೇ ಗ್ರಂಥಸ್ಥ ಉದಾಹರಣೆಗಳಿಂದಲೇ ಪರಿಶೀಲಿಸುವುದು ಸಮಂಜಸವಾಗಿದೆ. ಇದರಲ್ಲಿ ವಿಚಾರಕ್ಕೆ ಆಸ್ಪದವೇ ಇಲ್ಲ. ಅವು ಸ್ವಯಂ ವಿದಿತವಿವೆ. ಹೇಗಂದರೆ ಕೆಲವು ವಚನಗಳು ಪುನರಾವೃತ್ತವಾಗಿವೆ. ಹೀಗೆ ಪುನರಾವೃತ್ತ ವಚನಗಳಲ್ಲಿಯ ಭಿನ್ನ ಪಾಠಗಳನ್ನು ಇಲ್ಲಿ ಎತ್ತಿ ತೋರಿಸಲಾಗಿದೆ. ಇದರಿಂದ ಪಾಠಾಂತರಗಳನ್ನು ಅಸಾಧು ಪಾಠಗಳನ್ನು ವಿಚಾರಹೀನರಾಗಿ ಇಪ್ಪಕ್ಕಿಪ್ಪಂತೆ—ಮಕ್ಕಿಕಾ ಮಕ್ಕಿ ಎಂಬಂತೆ—ಇಟ್ಟಿರುವುದು ಸಂಪಾದಕರು ಗ್ರಂಥಸಂಪಾದನೆ ಕಾರ್ಯದ ಗೋಜಿಗೆ ಹೋಗಿಲ್ಲವೆಂದು ನಿರ್ಧಾರವಾಗುತ್ತದೆ. ಆಯಾ ವಚನದಲ್ಲಿಯೆ ಮತ್ತು ಅದೇ ಗ್ರಂಥದಲ್ಲಿ ಇತರ ಕಡೆಯಲ್ಲಿ ಅವೇ ವಚನಗಳು ಪುನರಾವೃತ್ತವಾಗಿ ಬಂದಿರುವ ಪ್ರಸಂಗದಲ್ಲಿಯೂ ವಿರೋಧಾಭಾಸಗಳನ್ನು ಕಂಡುಕೊಂಡು ಅವುಗಳನ್ನು ಸರಿಪಡಿಸುವ ತೊಂದರೆ ತೆಗೆದುಕೊಂಡಿಲ್ಲ. ಉದಾಹರಣೆಗಳು —

| ಕ್ರ. ಸಂ. | ವಚನ ಸಂಖ್ಯೆ | ಪಂಕ್ತಿ | ಪಾಠ | ವಚನ ಸಂಖ್ಯೆ | ಪಂಕ್ತಿ | ಪಾಠ | ವಚನ ಸಂಖ್ಯೆ | ಪಂಕ್ತಿ | ಪಾಠ |
|---|---|---|---|---|---|---|---|---|---|
| ೧. | ೨೬೬ | ೪ | ಶರಣನನುಪಮ ಸುಖಿ ! | ೩೯೪ | ೫ | ಶರಣ ಅನುಪಮ ಸುಖಿ. | | | |
| ೨. | ೧೩೮ | ೪ | ಜಂಗಮವು....ಬದುಕುವೆನು ! | ೪೬೬ | ೩ | ಜಂಗಮವು....ಬದುಕುವೆ ? | | | |
| ೩. | ೨೬೩ | ೫ | ಎಂಬೆನು | ೩೯೩ | ೪ | — | | | |
| ೪. | ೧೦೦ | ೩ | — | ೫೪೬ | ೩ | ಒಡೆಯ:ನರಸಿಯು ಸರಸ ಬೇಡ, | | | |
| ೫. | ೨೫೭ | ೧ | ಕುಡಿಯುತ್ತಿರ್ದ | ೩೫೪ | ೧ | ಕುಡಿವುತ್ತಿರ್ದ | | | |
| ೬. | ೧೦೩ | ೨ | ಮರೆಯಲ್ಲಿ ಹುಲ್ಲೆಗಂಬ | ೩೭೯ | ೨ | ಮಲೆಯಲ್ಲಿ ಹುಲ್ಲೆಗಂಬ | ೫೩೧ | ೨ | ಮರೆಯಲ್ಲಿರ್ದ ಹುಲ್ಲೆಗಂಬುವ |
| ೭. | ೨೬೧ | ೪ | ಕೈಯಲ್ಲಿ | ೩೯೧ | ೪ | ಕೈಯು | | | |
| ೮. | ೧೦೨ | ೪ | — | ೩೭೭ | ೪ | ಹೋಗಿ | ೫೪೮ | ೪ | ಹೋಗಿ, |
| | | ೫ | ಬರಿದೊರೆ | | ೫ | ನಿಮ್ಮ ತೊರೆಯಲ್ಲ ಬರಿದೆ | | ೫ | ಬರುದೊರೆ |
| ೯. | ೧೩೨ | ೩ | ಕರ್ಣಿಕಾ..ಸ್ವತಃ ಸಿದ್ಧನಾಗಿಪ್ಪ | ೪೬೨ | ೩ | ಕರ್ನಿಕಾ | | | |
| | | | | | ೪ | ಸ್ವಸ್ತಿಕಾಸೀನನಾಗಪ್ಪ | | | |
| ೧೦. | ೨೬೭ | ೧೧ | ಅನರ್ಪಿತಮುಃಖವಾಯಿತ್ತು | ೩೯೫ | ೯ | ಅನರ್ಪಿತವಾಯಿತ್ತು | | | |
| ೧೧. | ೨೫೮ | ೩ | ಮಾಡಿದೆನೆಂಬುವರು | ೩೫೫ | ೩ | ಮಾಡಿದೆನೆಂಬರು | | | |
| ೧೨. | [೨೪ | ೨ | ಘನಕೆ | ೩೩೮ | ೨ | ಗಗನಕ್ಕೆ | | | |
| | | ೩ | — | | ೩ | ತಾನೆ ಪ್ರಸಾದವಾದ, | | | |
| | | ೩ | ತಂತ್ರವಾದ— | | ೪ | ಯಂತ್ರವಾದ ತಾನೆ ಸಕಲ ವಿದ್ಯಾರೂಪನಾದ, | | | |
| | | ೪ | ಬಂದು | | ೫ | ಬಂದ ಬಳಿಕ | | | |
| | | ೫ | ತಾನೆ ಪ್ರಸಾದವಾದ ಕಾಣಾ | | ೬ | — | | | |

**ಟೀಕೆ:** ಮೇಲಿನ ವಿವರಣೆಯಿಂದ ಕಂಡುಬರುವುದೇನಂದರೆ—

(೧) ಸಂಪಾದನೆಯಲ್ಲಿ ಅರ್ಥಭೇದವಾಗದಿದ್ದರೂ ಅಕ್ಷರಪಲ್ಲಟವಿದ್ದರೆ ಅದನ್ನು ಕಾಣಿಸಬೇಕಾಗುವುದು. ಇದನ್ನು ಇತರ ಸಂಪಾದಿತ ಗ್ರಂಥದಿಂದ ಮನವರಿಕೆ ಮಾಡಿಕೊಳ್ಳಬಹುದು. ಈ ಕುರಿತು ಉದಾ: ೧, ೨ ನೋಡ ಬಹುದು.

(೨) ಉದಾಹರಣೆ ೩, ೪ ಗಳಲ್ಲಿ ಶಬ್ದ ಲೋಪಗಳು ವ್ಯಕ್ತವಾಗಿವೆ ಇದನ್ನು ಸರಿಪಡಿಸಬೇಕಾಗಿತ್ತು. ಇವರಂತೆಯೆ ಆನೆಯದು ಸಹ.

(೩) ಉದಾಹರಣೆ(೫, ೯:೪ನೆ ಸಾಲು) ಗಳು ವ್ಯಾಕರಣ ದೋಷ ಗಳನ್ನು ನಿದರ್ಶಿಸುತ್ತವೆ.

(೪) ೬ನೆಯದರಲ್ಲಿ ಮೂರು ಕಡೆಯಲ್ಲಿ ಅದೇ ವಚನವು ಬಂದಿರುವಾಗ ಪಾಠಾಂತರಗಳು ಭಿನ್ನವಾಗಿವೆ. ಅಷ್ಟೇ ಅಲ್ಲದೆ ಮೊದಲನೆಯದು ಅಸಾಧು ವಾಗಿದ್ದು ಮೂರನೆಯದು ಉಚಿತವಾಗಿದೆ

(೫) ಉದಾಹರಣೆ ೭, ೯, ೧೦, ೧೧ ಗಳು ಮೇಲಿನಂತಹ ಟೀಕೆಗೆ ಆಸ್ಪದವೀಯುತ್ತವೆ.

(೬) ಹನ್ನೆರಡನೆಯ ಉದಾಹರಣೆಯಲ್ಲಿ ಲೋಪದೋಷಗಳು ಅನೇಕ ವಾಗಿವೆ, ಹಾಗು ಗಂಭೀರವಾಗಿವೆ. ಇದು ವೀರಶೈವ ವಿಚಾರಧಾರೆಯಲ್ಲಿ ಮಹತ್ವದ್ದಾಗಿದೆ. ಈ ತರಹದ ದೋಷಗಳಿಂದ ಸಂಪಾದಕರು ಅಕ್ಷಮ್ಯ ದೂಷಣೆಗೆ ಗುರಿಯಾಗಿದ್ದಾರೆ ಈ ವಚನವು ಕರ್ನಾಟಕ ವಿಶ್ವವಿದ್ಯಾಲಯವು ಪ್ರಕಟಿಸಿದ ಶೂನ್ಯಸಂಪಾದನೆ ಸಂಪುಟ ೧ (೧೯೬೫) ರಲ್ಲಿ ಇದೆ. ಅದನ್ನು ಪರಿಶೀಲಿಸಿದ್ದರೆ ಇಂತಹ ದೋಷಗಳು ಉಂಟಾಗುತ್ತಿರಲಿಲ್ಲ. ಇದು ಸಂಪಾದನಾ ಕಾರ್ಯಕ್ಕೆ ಕಲಂಕ ತರುತ್ತದೆ.

ಇಂತಹ ಲೋಪದೋಷಗಳಿಂದ ಮುಕ್ತಿಕಂಠಾಭರಣ ಪ್ರಕಟನೆಯು ತುಂಬಿದ್ದರೂ ಉದಾಹರಣಾರ್ಥವಾಗಿ ಕೆಲವನ್ನೇ ಮಾತ್ರ ಹೇಳಲಾಗಿದೆ.

೨

ಪ್ರಸ್ತಾವನೆ (ಪುಟ ೧೬) ಯಲ್ಲಿ " ಇಲ್ಲಿ ಬಂದ ವಚನಗಳು ಬೇರೆ ಕಡೆಗೆ ಉಪಲಬ್ಧವಿದ್ದರೂ ಆ ಆಕರಗಳನ್ನು ನೋಡಿ ಇವನ್ನು ಪರಿಷ್ಕರಣ ಮಾಡ

ಲಾಗಿಲ್ಲ. ಈ ಆಕರದ ವಚನಗಳು ಇದ್ದಕ್ಕಿದ್ದಂತೆಯೇ ಪ್ರಕಟವಾಗುವುದು ಅವಶ್ಯವಿದ್ದುದರಿಂದ ಹಾಗೆ ಮಾಡಲಾಗಿಲ್ಲ" ಎಂದು ಹೇಳಿದ್ದಾರೆ. ಇದು ಸಮಂಜಸವಾಗಿಲ್ಲ; ತಮ್ಮ ಕರ್ತವ್ಯ ಮಾಡದೇ ಹೊಣೆ ಹಾರಿಸಿಕೊಳ್ಳುವ ಬರಡು ಹೇಳಿಕೆಯಾಗಿದೆ. ಚೌಕ ಕಂಸಿನಲ್ಲಿ ಇಲ್ಲವೆ ಅಡಿ ಟಿಪ್ಪಣಿಗಳಲ್ಲಿ ಶುದ್ಧ ಹಾಗು ಯೋಗ್ಯ ಪಾಠಗಳನ್ನು ಹೇಳಿ ಸಂಪಾದನಾ ಕರ್ತವ್ಯವನ್ನು ನಿರ್ವಹಿಸ ಬೇಕಾಗಿತ್ತು; ಹೀಗೆ ಮಾಡಿದ್ದರೆ ಮೂಲ ಪಾಠಕ್ಕೇನೂ ಚ್ಯುತಿ ಬರುತ್ತಿದ್ದಿಲ್ಲ. ಆವರೆ ಹೀಗೆ ಮಾಡಿಲ್ಲ. ಹೀಗೆ ಮಾಡದಿರುವುದರಿಂದ ಪೂರ್ವ ಪ್ರಕಟಿತ ತಮ್ಮವೇ ಆದ ಗ್ರಂಥಗಳ ಪ್ರಾಮಾಣ್ಯವನ್ನು ತಾವೇ ಸಂದೇಹಪಟ್ಟುಕೊಳ್ಳು ತ್ತಾರೋ ಎಂಬುದು ಭಾಸವಾಗುತ್ತದೆ. ಇದು ಸಂಪಾದಕರ ಕರ್ತವ್ಯಚ್ಯುತಿ ಯನ್ನು ನಿದರ್ಶಿಸುತ್ತದೆ. ಇದರಿಂದಾಗಿ ಉಂಟಾಗಿರುವ ಗಂಭೀರ ದೋಷ ಗಳನ್ನಷ್ಟೇ ಇಲ್ಲಿ ಉದಹರಿಸಲಾಗಿದೆ. ಈ ಕುರಿತು ಕರ್ನಾಟಕ ವಿಶ್ವವಿದ್ಯಾಲಯವು ಪ್ರಕಟಿಸಿದ (೧೯೬೫) ಚನ್ನಬಸವಣ್ಣನವರ ವಚನಗಳು ಗ್ರಂಥದಲ್ಲಿಯ ವಚನ ಗಳ ಪಾಠಗಳನ್ನು ಚನ್ನಬಸವಣ್ಣನವರವೇ ಆದ ವಚನಗಳ ಮುಕ್ತಿಕಂಠಾ- ಭರಣದಲ್ಲಿರುವ ಪಾಠಗಳನ್ನು ಇಲ್ಲಿ ತುಲನೆ ಮಾಡಲಾಗಿದೆ.—

| ಮುಕ್ತಿಕಂಠಾಭರಣದಲ್ಲಿಯ ವಚನ | | | ಕ. ವಿ. ವಿ. ಚನ್ನಬಸವಣ್ಣನವರ ವಚನ | | |
|---|---|---|---|---|---|
| ವಚನ ಸಂಖ್ಯೆ | ಸಾಲು | ಪಾಠ | ವಚನ ಸಂಖ್ಯೆ | ಸಾಲು | ಪಾಠ |
| II. ೮೭ | ೪ | ಸರ್ವೇಂದ್ರಿಯಂಗಳಲ್ಲಿ ಲಿಂಗವವಗ್ರಹಿಸಿ | ೧೧೧೯ | ೫ | ಸರ್ವೇಂದ್ರಿಯಂಗಳ ನಿಗ್ರಹಿಸಿ |
| | ೬ | ವ್ಯಾಪಾರವ ತಿಳಿದು | | ೭ | ವ್ಯಾಪಾರವಳಿದು |
| | ೭ | ದುರ್ಭಾವ ಪ್ರಕೃತಿಯ ತಿಳಿದು | | ೮ | ದುರ್ಭಾವ ಪ್ರಕೃತಿಯಳಿದು |
| IV. ೧೪೨ | ೨ | ಭಕ್ತಿಗೆ ಆಚಾರವೆ ಬೀಜ | ೮೪೦ | ೨ | ಭಕ್ತಿಗೆ ಅನುಭಾವವೇ ಆಚಾರ |

| | | | | | |
|---|---|---|---|---|---|
| ೧೪೯ | ೮ | ಆನೆಯು ಮೊನೆಯೊಳ-ಗಿಕ್ಕಿ | ೮೪೧ | ೮ | ಆನೆಯು ಮೂನದೊಳಿಕ್ಕಿ |
| ೧೫೨ | ೪ | ಪ್ರಸಾದ ಸನುಮತಕ್ಕೆ ಇಲ್ಲ | ೩೭೬ | ೪ | ಪ್ರಸಾದ ಪ್ರಸನ್ನತೆಯಿಲ್ಲ |
| ೧೬೫ | ೪ | — | ೩೯೯ | ೪ | ಸಲುಹುವುದು ಆಚಾರ. |
| | ೫ | ಆಚಾರ, ಆದಕೆ ಉಣಲುಂಟು | | ೫ | ಆ ಮಗುವಿಂಗೆ ಊರಲು |
| ೧೭೧ | ೫ | ಮರುಹುಗುಣ ನಾಸ್ತಿ | ೧೪೦೮ | ೪ | ಮರಹುನಾಸ್ತಿ |
| ೧೭೨ | ೬ | ಕರುವಥದಿಚ್ಛೆ | ೧೪೦೩ | ೬ | ಕರಣಮಥನದಿಚ್ಛೆ. |

ಈ ಸಂಬಂಧವಲ್ಲಿ ಬಸವಣ್ಣನವರ ವಚನದಿಂದ ಒಂದು ಉದಾಹರಣೆಯನ್ನು ಹೇಳುವುದು ಉಚಿತವೆನಿಸುತ್ತದೆ. ಮುಕ್ತಿಕಂಠಾಭರಣದ II ೭ ವಚನದ ಸಾಲು ಇಂತಿದೆ. " ಕರುವನಗಲಿಸಿ ತಾಯ ಮೊಲೆವಾಲ ಮರುಗಿಸಿ ಕರೆದುಣಬೇಡವೋ". ಇದು ಎಷ್ಟು ಅರ್ಥಹೀನವಾಗಿದೆ. ಮೊಲೆವಾಲ ಮರುಗಿಸಿ ಎಂದರೆ ಏನು, ಎಂತಹ ವಿಚಿತ್ರ? ಇದನ್ನು ಬಸವಣ್ಣನವರ ವಚನ ೪೯೯ ದಲ್ಲಿಯ ಈ ಪಾಠ "ಕರುವನಗಲಿಸಿ ತಾಯ ಮರುಗಿಸಿ ಮೊಲೆ-ವಾಲ ಕರೆದುಣಬೇಡವೊ"ದೊಂದಿಗೆ ಹೋಲಿಸಿ ನೋಡಿದಾಗ ಸಂಪಾದಕರು ಮಾಡಿದ ತಪ್ಪು ಕಂಡುಬರುತ್ತದೆ. ಇಂತಹ ಘನದೋಷಗಳುಳ್ಳ ಸಂಪಾದನಾ ಕಾರ್ಯಕ್ಕೆ ಏನು ಬೆಲೆ ಇದೆ!

ಇದರಂತೆಯೇ ಮುಕ್ತಿಕಂಠಾಭರಣದಲ್ಲಿಯ ಇತರ ವಚನಗಳನ್ನು ಅವುಗಳ ಇತರ ಗ್ರಂಥಗಳಲ್ಲಿಯ ಮೂಲ ಹಾಗು ಪ್ರಮಾಣಿತ ಪ್ರಕಟಿತ ವಚನಗಳೊಂದಿಗೆ ತುಲನೆ ಮಾಡಿ ಹೇಳಬಹುದಾಗಿತ್ತಾದರೂ ವಿಸ್ತಾರಭಯದಿಂದ ಹಾಗು ಉದಾಹರಣೆ ಮಾತ್ರವಾಗಿ ಮೇಲಿನವುಗಳನ್ನಷ್ಟೇ ಹೇಳಲಾಗಿದೆ. ಇದರಿಂದ ಸಂಪಾದನಾ ಕಾರ್ಯದ ಮೇಲೆ ಸಾಕಷ್ಟು ಬೆಳಕು ಬೀಳುತ್ತದೆ; ಹಾಗು ಗಂಭೀರ ಲೋಪದೋಷಗಳು ಕಂಡುಬರುತ್ತವೆ. ಆದುದರಿಂದ "ಗ್ರಂಥ ಸಂಸ್ಕರಣ ತತ್ವಗಳ ಮರ್ಯಾದೆಯಲ್ಲಿಯೇ ಇದರ ಪರಿಷ್ಕರಣ

ಕಾರ್ಯವನ್ನು ಮಾಡಲಾಗಿದೆ" (ಪು. ೧೬) ಎಂದು ಹೇಳಿಕೊಂಡಿರುವುದು ಯಥಾರ್ಥವಾಗಿರದೆ ಪೊಳ್ಳು ಹಾಗು ಜೊಳ್ಳು ಹೇಳಿಕೆಯಾಗಿದೆ.

## D5 ಪ್ರಸ್ತಾಪ

ಗ್ರಂಥಸಂಪಾದನಾ ಕಾರ್ಯದ ಅಂಗವಾಗಿ ಸಂಪಾದಕರು ೧೬ ಪುಟಗಳಷ್ಟು ಪ್ರಸ್ತಾವನೆಯನ್ನು ಬರೆದಿದ್ದಾರೆ. ಅದರಲ್ಲಿ ಮುಕ್ತಿಕಂಠಾಭರಣದ ಸಾರಾಂಶವನ್ನು ಹೇಳಿದ್ದಾರೆ, ಮತ್ತು ಇದರ ಮಹತ್ವವನ್ನು ಹೇಳಿದ್ದಾರೆ. ಮೊದಲಿಗೆ ಇವರ ಸಾರಾಂಶದ ಕುರಿತು ಹೇಳುವುದು ಸಮಂಜಸವಾಗಿದೆ. ಇದರ ಸಾರಾಂಶವು ಸ್ಥೂಲವಾಗಿ (ಮೊದಲಿನ ಮೂರು ಪ್ರಕರಣಗಳ ಬಗ್ಗೆ ಏನೂ ಹೇಳಿಲ್ಲ) ಚನೆಯದಾದ ಆಚಾರ ಪ್ರಶಂಸೆ ಪ್ರಕರಣ ೫೩ನೆಯ ವಚನದಿಂದ ಪ್ರಾರಂಭವಾಗುತ್ತದೆ. ಇದರ ಹಿಂದಿನ ವಚನಗಳಲ್ಲಿಯು, ಮುಖ್ಯವಾಗಿ ವಚನ ೩೨, ೩೩, ೫೧ ಗಳಲ್ಲಿಯು, ಅಂಶಗಳನ್ನೇನೂ ಹೇಳದೆ—ಹಿಂದಿನದನ್ನು ಏಕೆ ಬಿಟ್ಟರೊ ತಿಳಿಯದು; ಇವುಗಳಲ್ಲಿ ಅಶ್ಲೀಲವಾದುದು ಹೇಯವಾದುದು ಇದೆ; ಸಮರಸವನ್ನು ತುಚ್ಛವಾಗಿ ಕೀಳಾಗಿ ಕಡೆಗಣಿಸಿ ಸಂಭೋಗವೇ ಸಮರಸವೆಂಬಂತೆ ವಿವರಿಸಲಾಗಿದೆ; ಇದೇ ಕೊನೆಯಲ್ಲಿಯು ಹಾದರದ ಚರ್ಚೆಗೆ ಪೀಠಿಕೆಯಾದಂತಿದೆ— ಒಮ್ಮೆಲೆ ವಚನ ೫೩ನೆಯ ವಿಚಾರ "ತಮ್ಮಂಗನೆಯರ ಕೂಟ ಕೂಟವೋ, ಕೂಟ ಬೇಟವೋ" ಎಂಬ ಪರಿಹಾಸದಲ್ಲಿ ಪ್ರಸ್ತಾವನೆಯು ಪ್ರಾರಂಭವಾಗುತ್ತದೆ. ವಚನ ೫೩ರಿಂದ ೯೮ರ ವರೆಗೆ ಸತಿಪತಿ ಸಂಭೋಗದ ರಚ್ಚೆಯ ಮಾತುಗಳೇ ಇವೆ; ಇದು ಅಡಗುಲಜ್ಜೆಯ ಕಿತಾಪತಿಯಾಗಿದೆ. ೫೩ರ ಮುಂದಿನ ವಚನಗಳಲ್ಲಿ ಹೇಳಿದುದು ಅಚಿಂತ್ಯ, ಅಸಹ್ಯ, ಅಸತ್ಯ, ಕಲ್ಪಿತವಾದುದು ಅಂತೆಯೇ ಕುಟಿಲವಾದುದು. ಇವಕ್ಕೇನೇ ಸಂಪಾದಕರು 'ವೀರಶೈವಾಚಾರದಲ್ಲಿ ಪ್ರಪಂಚ ಪಾರಮಾರ್ಥಗಳ ಸಾಮರಸ್ಯದ ರಹಸ್ಯವನ್ನು ಬಯಲಿಗೆಳೆಯುವದು' ಎಂದು ಹೇಳಿದುದು ವಿಚಿತ್ರವಾಗಿದೆ. ಏಕೆಂದರೆ ಈ ರೀತಿಯಾಗಿ— ಸಮರಸಭಕ್ತಿಯನ್ನು ಕಾಮವಿಚಾರದ ಅಂಗ ಚೇಷ್ಟೆಗಳಿಗೆ ಹೋಲಿಸಿದುದನ್ನು—ಹನ್ನೆರಡನೆಯ ಶತಮಾನದಲ್ಲಿಯ ಮತ್ತು

ಆನಂತರದ ಪ್ರಸಿದ್ಧ ಶರಣರು ಕಲ್ಪಿಸಿಲ್ಲ, ಭಾವಿಸಿಲ್ಲ, ಹೇಳಿಲ್ಲ. ಹೀಗೆ ಹೇಳಿದುದು ಕುಟಿಲತನವಾಗಿದೆ, ಕುಹಕತನವಾಗಿದೆ.

## D51 ಕಾಲ್ಪನಿಕತೆ

ಮುಂದುವರೆದು ಪ್ರಭುದೇವರು ಬಸವಣ್ಣನನ್ನು ಹೀನಾಯವಾನವಾಗಿ ಜರೆದದ್ದನ್ನು, ಬೈದದ್ದನ್ನು ಮತ್ತು ಅದರಿಂದ ನೊಂದುಕೊಂಡ ಚನ್ನಬಸವಣ್ಣನು ಪ್ರಾಣವಿಯೋಗವನ್ನು ಮಾಡಿದ್ದನ್ನು ಮತ್ತು ಆ ಸಂದರ್ಭದಲ್ಲಿ ಅನೇಕರು ಸಂಬಂಧವಿಲ್ಲದವರು ಸಹ ಪ್ರಲಾಪಿಸಿದುದನ್ನು ವಿವರಿಸಲಾಗಿದೆ. ಆ ನಂತರದಲ್ಲಿ ಬಾಲಸಂಗಯ್ಯನ ಪ್ರಸಂಗ ಹಾಗು ಅವನು ಆಡಿದ ವಚನಗಳ ಬಗ್ಗೆ ಹೇಳಲಾಗಿದೆ. ಇಲ್ಲಿಗೆ ಅಂದರೆ ಸುಮಾರು ೩೧೫ (೫೫೫ ಪೈಕಿ) ವಚನಕ್ಕೆ ಅವರ ಸಾರಾಂಶವು ಮುಕ್ತಾಯವಾಗುತ್ತದೆ. ಇವೆಲ್ಲ ಕಥೆ ಕಾದಂಬರಿ ನಾಟಕಗಳಲ್ಲಿ ಬರುವಂತೆ ಕಾಲ್ಪನಿಕ ಕಟ್ಟುಕತೆಗಳು. ಐತಿಹಾಸಿಕ ಸಂಗತಿಗಳಿಗೆ ಬಹುದೂರ; ಅಸತ್ಯವಾದವುಗಳೇ ಸೈ.

## D52 ಗೊಣೆ

ಅಂತೂ ಸಂಪಾದಕರ ಪ್ರಸ್ತಾವನೆಯು ಪುಂಗಿ ಸ್ಥೂಲವಾಗಿ ಆಚಾರ ಪ್ರಶಂಸೆ ಪ್ರಕರಣದ ೫೩ ನೆಯ ವಚನದಿಂದ ಆರಂಭವಾಗಿ ವಚನ ೩೧೫ ರ ವರೆಗೆ ರಾಗವನ್ನೆಳೆದು ಮುಂದೆ ಬಂದಾಗುತ್ತದೆ. ಏಕೆಂದರೆ ೫೩ರ ಹಿಂದೆ ಹೇಳಿದ ವಚನಗಳಲ್ಲಿ ಅಸಾಧುವಾದುದು ಅಂಗಚೇಷ್ಟೆಗೆ ಸಂಬಂಧಿತವಾದುದು ಹೇಳಬಾರದುದು ಆಗಿರುವ ಕಾರಣ ಬಿಡಲಾಗಿದೆ ಎನಿಸುತ್ತದೆ. ಅದರಂತೆಯೇ ಆ ನಂತರದ ವಚನಗಳಲ್ಲಿ ಹೇಳಿಕೊಳ್ಳುವಂಥದು ಇಲ್ಲದ ಮೂಲಕ ಹಾಗು ನಿಷಿದ್ಧವಾದ ಹಾದರದ ಬಗ್ಗೆ ಪ್ರಸ್ತಾಪಿಸಿ ಪ್ರತಿಪಾದಿಸಿ ಅದು ನಿಷಿದ್ಧವಲ್ಲವೆಂದು ಹೇಳಿರುವ ಕಾರಣ ಸಂಪಾದಕರ ಸಾರಾಂಶ ಕಥನವು ಮುಂದೆ ಸಾಗದೆ ಸ್ಥಗಿತವಾಗಿದೆ. ಆದರೂ ಈ ಪುಸ್ತಕವು ವೀರಶೈವ ಧರ್ಮ ತತ್ವಗಳ ವಿವರಣೆಯ ದೃಷ್ಟಿಯಿಂದ ಮಹತ್ವದ್ದಾಗಿದೆ ಎಂದು ಹೇಳುವ ದುಸ್ಸಾಹಸ ಮಾಡಿದ್ದಾರೆ, ಎದೆಗಾರಿಕೆ ತೋರಿದ್ದಾರೆ.

## D53 ದೋಷ

ಆದರೂ ಸಂಪಾದಕರು ಈ ಪ್ರಸ್ತಾವನೆಯಲ್ಲಿಯೂ ಸಹ ತಮ್ಮ ಅಲಕ್ಷತೆಯನ್ನು ಅದಕ್ಷತೆಯನ್ನು ವಿಪರ್ಯಾಸಗೊಳಿಸುವ ಕಲೆಯನ್ನು ತೋರಿಸದೆ ಬಿಟ್ಟಿಲ್ಲ. ಅವುಗಳನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವಾಗಿದೆ. ಏಕೆಂದರೆ ಇವೇ ಗುಣಗಳೇ ಲಕ್ಷಣಗಳೇ ಸಂಪಾದನೆಯ ಕಾರ್ಯದಲ್ಲಿಯೂ ಮೈಗೊಂಡಿವೆ. — (೧) ಪುಟ ೮ ರಲ್ಲಿ ಪತಿಯಾಧೀನ ಎಂದು ಹೇಳುವುದಕ್ಕೆ ಬದಲಾಗಿ ವೃತಿಯಾಧೀನ ಎಂದು ಬರೆಯಲಾಗಿದೆ (೨) ಪಠ್ಯಭಾಗವಾದ ವಚನ ೨೨೭ ದಲ್ಲಿ 'ಚನ್ನನ ಮೆರೆದುದೆ ಆಕೇಡು' ಎಂದಿದ್ದರೆ ಅದು ಪ್ರಸ್ತಾವನೆ ಪುಟ ೧೦ರಲ್ಲಿ 'ಚೆನ್ನನ ಮೆರೆವ ಆಕೇಳು' ಎಂದು ತಪ್ಪಾಗಿದೆ (೩) ವಚನ ೨೭೩ ದಲ್ಲಿ ' ಮಹಾಪೂರ್ಣಗುರುಕರಜಾತ ಚನ್ನಬಸವಣ್ಣ ' ಎಂದಿದ್ದರೆ ಇಲ್ಲಿ ' ಮಹಾಪೂರ್ಣಗುರುಕರಜಾತ ಬಸವಣ್ಣ ' ಎಂದು ತಪ್ಪಾಗಿ ಹೇಳಲಾಗಿದೆ (೪) ವಚನ ೩೦೩ ಮೇಲಿನ ಗದ್ಯದಲ್ಲಿ 'ಪ್ರಭುದೇವರು ಆ ಬಾಲಸಂಗನಂ ತಮ್ಮಂಕ ಪೀಠದಲ್ಲಿ ಮೂರ್ತಿಗೊಳಿಸಿ' ಎಂದಿದ್ದರೆ ಪ್ರಸ್ತಾವನೆಯಲ್ಲಿ " ಪ್ರಭುದೇವರು ಬಾಲಸಂಗಯ್ಯನನ್ನು ತಮ್ಮ **ತಲೆಯ ಮೇಲೆ** ಕುಳ್ಳಿರಿಸಿಕೊಂಡು" ಎಂದು ಅಪಹಾಸ್ಯಕರವಾದ ತಪ್ಪು ಮಾಡಿದ್ದಾರೆ. ಇದಲ್ಲದೆ ರೇವಣಸಿದ್ಧನಿಗೆ ಮುನ್ನೂರು ಧರ್ಮಪತ್ನಿಯರಿದ್ದರೆಂದು ವಚನ ೨೧೨ ರಲ್ಲಿ ಮತ್ತು ೫೫ ರಲ್ಲಿ ಹೇಳಿದ್ದುದನ್ನು ಪಲ್ಲಟಿಸಿ "ತನ್ನಂಗನೆಯ ಬಿಟ್ಟನೆ ರೇವಣಸಿದ್ಧ ತನ್ನಂಗನೆ ಮುನ್ನೋರ್ವರ (ಮುನ್ನೂರಕ್ಕೆ ಬದಲಾಗಿ ಮುನ್ನೋರ್ವರ ಎಂದು ಹೇಳಲಾಗಿದೆ) ಪುಟ ೭, ಮತ್ತು "ತ್ರಿಪುರಾಂತಕನ ಕೆರೆಯಲ್ಲಿ ಕೆಲಸಮಾಡುತ್ತಿದ್ದ ರೇವಣಸಿದ್ಧೇಶ್ವರನ ಮುನ್ನೂರು ರಾಜಕುಮಾರಿಕೆಯರು" ಪುಟ ೧೦, ಹಾಗು ಪುಟ ೧೪ ರಲ್ಲಿ "ರೇವಣಸಿದ್ಧೇಶ್ವರ ಆತನ ಮುನ್ನೂರು ಕನ್ನೆಯರು"— ಈ ರೀತಿಯಾಗಿ ಪತ್ನಿಯರನ್ನು ಕನ್ನೆ (ಮಗಳು) ಯರನ್ನಾಗಿ ವಿಪರ್ಯಾಸಗೊಳಿಸಲಾಗಿದೆ. ಇವರಲ್ಲಿ ಎಂತಹ ಚಾಣಾಕ್ಷತನ ಇದೆಯೋ!

## D54 ವಿಪರ್ಯಾಸ

ಅಸತ್ಯ ಕೃತಕ ದೋಷಯುಕ್ತವಾದ ವಚನ "ಅಯ್ಯಾ ಭಕ್ತಿಗೆ ಬೀಡಾಮದು ಕಲ್ಯಾಣ.... ಹಿಂದಿನಂತನುಭವ ಹಿಂದಿನಂತೆ ಭಕ್ತಿ ಇಲ್ಲ....

ಆಡಲು ಭಯವಿಲ್ಲ"ವನ್ನು ಐತಿಹಾಸಿಕ ಮಹತ್ವವುಳ್ಳದ್ದೆಂಬಂತೆ ಕಲ್ಪಿಸಿ ಎರಡು ಸಾರಿ ಪುಟ ೯ ಹಾಗು ೧೫ ಗಳಲ್ಲಿ ಹೇಳಿದುದು ಸಂಪಾದಕರ ದೃಷ್ಟಿಕೋಣದೋಷ ಹಾಗು ಕಲುಷಿತಮನ ಇವುಗಳನ್ನು ನಿದರ್ಶಿಸುತ್ತದೆ; ಅದರಂತೆಯೇ, ರೇವಣಸಿದ್ಧೇಶ್ವರನ ೩೦೦ ಪತ್ನಿಯರನ್ನು ೩ ಬಾರಿ ಪಲ್ಲಟಿಸಿ ಅವರು ರೇವಣಸಿದ್ಧನ ಕನ್ನಿಕೆ (ಮಕ್ಕಳು) ಯರೆಂದು ಹೇಳಿದುದು (ಪರಿಶಿಷ್ಟ IV) ಸಹ ಸತ್ಯತೆಯ ವಿಪರ್ಯಾಸವಾಗಿದೆ. ಹೀಗೆ ಮಾಡಿರುವುದಕ್ಕೆ ಕಾರಣವೇನೋ? ಆದರೆ ರೇವಣಸಿದ್ಧೇಶ್ವರನ ಪತ್ನಿಯರ ಸಂಖ್ಯೆಯ ಬಗ್ಗೆ ಉಲ್ಲೇಖಿಸಿ–ಹೆಂಡಂದಿರ ಸಂಖ್ಯೆಯಲ್ಲಿ ಅವನು ಕಳೆದ ದಶಕದ ಹೈದರಾಬಾದದ ನಿಝಾಮನನ್ನು ಮೀರಿದ್ದನು ಎಂಬುದನ್ನು— ಅದು ಐತಿಹಾಸಿಕ ಸಂಗತಿಯೆಂದು ಮತ್ತು ೩೦೦ ರಾಜಕುಮಾರಿಯರನ್ನು ಧರ್ಮಪತ್ನಿಯರನ್ನಾಗಿ ಮಾಡಿಕೊಂಡ ರೇವಣಸಿದ್ಧನ ವೈಭವ ವಿಲಾಸಗಳನ್ನು ಪ್ರಸ್ತಾವನೆಯಲ್ಲಿ ಏಕೆ ಉಲ್ಲೇಖಿಸಲಿಲ್ಲವೋ ತಿಳಿಯದು.

## D6 ಶಬ್ದಾರ್ಥ

ಸಂಪಾದನೆಯ ಕಾರ್ಯದ ಅಂಗವಾಗಿ ಮುಕ್ತಿಕಂಠಾಭರಣ ಗ್ರಂಥದ ಕೊನೆಯಲ್ಲಿ 'ಕಠಿಣ ಶಬ್ದಕೋಶ'ವನ್ನು ಕೊಡಲಾಗಿದೆ. ಅದರಲ್ಲಿ ಹೇಳಿರುವ 'ಸಿತಗ' ಎಂಬ ಶಬ್ದದ ಅರ್ಥವು ವಿಪರೀತವಾಗಿದೆ, ದುಷ್ಟವಾಗಿದೆ. ಈ ಶಬ್ದವು ಬಸವಣ್ಣನವರ ವಚನದಲ್ಲಿ ಬಂದಿದೆ. ಬಸವಣ್ಣನವರ ವಚನ (ಷಟ್‌ಸ್ಥಲ ವಚನಗಳಲ್ಲಿ ೬೪೩ ಸಂಖ್ಯೆಯನ್ನು ಹೊಂದಿರುವುದು) "ಒಡೆಯರು ತಮ್ಮ" ಎಂಬ ಶಬ್ದಗಳಿಂದ ಆರಂಭವಾಗಿ "ಕೂಡಲಸಂಗಮದೇವ ಕರಸಿತಗನಯ್ಯ" ಶಬ್ದಗಳಿಂದ ಕೊನೆಗೊಂಡುದು ಮುಕ್ತಿಕಂಠಾಭರಣದಲ್ಲಿ ೫೪೬ ವಚನವಾಗಿ, ಅಚ್ಚಾಗಿದೆ. ಇದರಲ್ಲಿಯ ವಾಕ್ಯವು ಹೀಗಿದೆ "ಒಡೆಯ ನರಸಿಯ ಸರಸ ಬೇಡ ಕೂಳಸೊಕ್ಕು ತಲೆಗೇರಿ ರಾಣಿವಾಸದೊಡನೆ ಸರಸ ಬೇಡ ಕೂಡಲಸಂಗಮದೇವ ಕರಸಿತಗನಯ್ಯ". ಇದರಲ್ಲಿಯ ಶಬ್ದ 'ಸಿತಗ' ಸುಪರಿಚಿತವಲ್ಲ. ಆದುದರಿಂದ ಅದರ ಅರ್ಥವನ್ನು ತಿಳಿದುಕೊಳ್ಳಲಿಕ್ಕೆ 'ಕಠಿಣ ಶಬ್ದಕೋಶಕ್ಕೆ ಮೊರೆಹೋಗಬೇಕಾಗುತ್ತದೆ. ಆದಕಾರಣ ಪುಟ

೨೧೭ ರಲ್ಲಿ ನೋಡಿದಾಗ "ಸಿತಗ=ಜಾರ" ಎಂದು ಕೊಡಲಾಗಿದೆ. ಹೀಗೆ ಹೇಳಿದುದು ಸಮಂಜಸವಿಲ್ಲ, ಕ್ರೂರ ಅಪಹಾಸ್ಯವಾಗಿದೆ.

ಇದರ ಭಾವಾರ್ಥ ಹೀಗಿದೆ.—ಪರಸತಿಯರೊಡನೆ ಸರಸವಾಡ ಬೇಡ; ಸರಸವಾಡಿದರೆ ದೇವರು ದಂಡಿಸುವನು. ಏಕೆಂದರೆ ದೇವನಲ್ಲಿ ಅನುಗ್ರಹ ಶಕ್ತಿ ಇದ್ದಂತೆ ದಮನ ಶಕ್ತಿಯೂ ಇದೆ. ಆದುದರಿಂದ ಇಲ್ಲಿಯ ಪದ 'ಸಿತಗ'ಕ್ಕೆ ಕಠೋರ, ಕೆಟ್ಟವ ಎಂಬ ಅರ್ಥವಿದೆ. ಬಸವನಾಳರು ಈ ವಚನದ ಅರ್ಥವನ್ನು ತಾವು ಸಂಪಾದಿಸಿದ "ಬಸವಣ್ಣನವರ ವಚನಗಳು" ಪುಟ XL ದಲ್ಲಿ ಸ್ಪಷ್ಟೀಕರಿಸುತ್ತ 'ಸಿತಗ'ಕ್ಕೆ ಕೆಟ್ಟವ ಎಂಬ ಅರ್ಥ ಹೇಳಿದ್ದಾರೆ. ಇದರಂತೆಯೆ ಕರ್ನಾಟಕ ವಿಶ್ವವಿದ್ಯಾಲಯದವರು ಪ್ರಕಟಿಸಿದ (೧೯೬೮) ಬಸವಣ್ಣನವರ ವಚನ ಗ್ರಂಥದ ಪುಟ ೬೩೭ ದಲ್ಲಿ ಇದೇ ವಚನದಲ್ಲಿ ಬಂದಿರುವ 'ಸಿತಗ' ಶಬ್ದಕ್ಕೆ 'ನಿಷ್ಠುರ, ಕಠೋರ, ಕೆಡುಕ' ಎಂಬ ಅರ್ಥ ಹೇಳಿದ್ದಾರೆ. ಹಾಗಾದರೆ ಒಬ್ಬರೇ ಸಂಪಾದಕರಿಂದ ಸಂಪಾದಿತವಾದ ಎರಡು ಗ್ರಂಥಗಳಲ್ಲಿ ಬಂದಿರುವ ಒಂದೇ ವಚನದಲ್ಲಿಯ ಒಂದೇ ಶಬ್ದಕ್ಕೆ ಹೀಗೆ ವಿಪರೀತ ಅರ್ಥವೇಕೋ!

ಬಹುಶಃ ಮುಕ್ತಿಕಂಠಾಭರಣ ಗ್ರಂಥವು ಜಾರ (ಹಾದರ) ವಿಷಯವನ್ನು ಪ್ರತಿಪಾದಿಸುವುದರಿಂದ ಇಲ್ಲಿ ಅದಕ್ಕೆ ಉಚಿತವಾಗುವಂತೆ 'ಸಿತಗ' ಅಂದರೆ 'ಜಾರ' ಎಂಬ ಅರ್ಥವನ್ನು ಹೇಳಲಾಗಿದೆಯೇನೋ! (ಪರಿಶಿಷ್ಟ IV ನೋಡಿರಿ). ಬಸವಣ್ಣನು ದುಷ್ಟ ಭ್ರಷ್ಟ ಭಂಡನಾದರೆ ಅವನ ಆರಾಧ್ಯದೇವತೆಯಾದ ಕೂಡಲಸಂಗಮದೇವನು ಜಾರ! ಅಂತೂ ಭಕ್ತನಿಗೆ ಯೋಗ್ಯನಾದ ದೇವರು! ಇದರಿಂದ ಕರ್ನಾಟಕ ವಿಶ್ವವಿದ್ಯಾಲಯದ ಸಂಪಾದಕರು ತಮ್ಮ ಇಂತಹ ಕಾರ್ಯದಿಂದ ವೀರಶೈವ ಧರ್ಮವನ್ನೂ ಅದರ ಪ್ರಖ್ಯಾತ ಶರಣರನ್ನೂ ವೀರಶೈವ ವಾಙ್ಮಯವನ್ನೂ ವಿಪರೀತವಾಗಿ ಉದ್ಧರಿಸುತ್ತ ಹೊರಟಂತೆ ಕಾಣುತ್ತದೆ.

## D7 ಯೋಗ್ಯತೆ

ಸಂಪಾದಕರು ಮುಕ್ತಿಕಂಠಾಭರಣದ ಗುಣ ಶೀಲ ಯೋಗ್ಯತೆಗಳನ್ನು ಪರಿಶೀಲಿಸಿಲ್ಲ, ವಿವೇಚಿಸಿಲ್ಲ. ಈ ಹೇಯವಾದ ನಿಂದ್ಯವಾದ ಅಸಾಧುವಾದ

ಚೌರ್ಯಕೃತಿಯನ್ನು ಪ್ರಕಟಿಸುವುದು ಉಚಿತವೋ ಅಲ್ಲವೋ ಎಂಬುದನ್ನು ವಿಚಾರಿಸಿಲ್ಲ. ಇಷ್ಟೇ ಅಲ್ಲದೆ ಇದು ನಿಜವಾದ ಕೃತಿಯೋ ಚೋರ (ಬಹುಶಃ ಚೋರ ಕೃತಿಯೆಂದು ಹೊಳೆದಿದ್ದರೂ ಬಸವಣ್ಣನ ಬಗೆಗಿರುವ ದುರ್ಭಾವನೆಗೆ ಪುರಸ್ಕಾರ ಹಾಗೂ ಆಧಾರ ದೊರಕುವುದೆಂದು ನಿಜವಾದ ಕೃತಿಯಂತೆ ನಟಿಸಿರಲೂ ಬಹುದು) ಕೃತಿಯೋ ಎಂಬುದನ್ನು ನಿಷ್ಕರ್ಷಿಸಿಲ್ಲ. ಹೀಗೆ ನಿಷ್ಕರ್ಷಿಸುವುದು ಪ್ರಯಾಸದ್ದಲ್ಲ. ಅದು ಸುಲಭವಿದೆ, ಸ್ವಯಂ ಸ್ಪಷ್ಟವಿದೆ. ಅವಕ್ಕೆ ( ಕೃತಕ ವಚನಗಳನ್ನು ಕಂಡುಹಿಡಿಯಲಿಕ್ಕೆ ) ಈ ಪ್ರಮಾಣಗಳು ಒದಗುವವು.— (೧) ಭಾಷೆ, ಶೈಲಿ (೨) ಬಳಸಿದ ಶಬ್ದ, ಉಪಮೆ (೩) ವಿಚಾರಧಾರೆ (೪) ವ್ಯಕ್ತವಾದ ಭಾವನೆ. ಹಲವು ವಚನಗಳಲ್ಲಿ ವ್ಯಕ್ತಿಗಳ ಸಂಬೋಧನೆ ಇದೆ. ಇದೊಂದೇ ಪ್ರಮಾಣವು ಅದೊಂದು ಚೋರ ಕೃತಿಯೆಂದು ನಿಷ್ಕರ್ಷಿಸಲು ಸಾಕು. ಏಕೆಂದರೆ ಪರಸಂಬೋಧನೆಯು ವಚನಗಳಲ್ಲಿ ಕಂಡುಬರುವುದು ತೀರ ವಿರಳವಾಗಿದೆ. ಇದು ಈ ಹಿಂದೆ ಕೊಟ್ಟಿರುವ ಅಂಕಿಸಂಖ್ಯೆಗಳಿಂದ ಕಂಡುಬರುವುದು. ಯುಕ್ತಾಯುಕ್ತವಾಗಿ ವಿಚಾರ ಮಾಡಿದ್ದರೆ ಇದೊಂದು ಅಯೋಗ್ಯ ದುಷ್ಟಕೃತಿಯೆಂದು ಕಂಡುಬರುತ್ತಿತ್ತು.

ಒಟ್ಟಿನಲ್ಲಿ, ಸಂಪಾದನಾಕಾರ್ಯವನ್ನು ಏನೇನೂ ಮಾಡಿಲ್ಲ (ಪರಿಶಿಷ್ಟ II ಮತ್ತು IV ನೋಡಿರಿ) ಮತ್ತು ಮಾಡಿರುವುದು ಗೌಣವಾಗಿದೆ ಎಂದು ನಿಃಸಂಶಯವಾಗಿ ಹೇಳಬಹುದು.

———

## E ವಚನ-ಕಾದಂಬರಿ-ನಾಟಕ (ಗತಿ-ಮತಿ)

### E1 ಸ್ವರೂಪ

ಮುಕ್ತಿಕಂಠಾಭರಣ ಪುಸ್ತಕದ ಅನಾಮಧೇಯ ಚೋರ ಗ್ರಂಥಕರ್ತನು, ಇದನ್ನು ಒಂದು ಸ್ವರಚಿತ ವಚನಗಳಿಂದ ಮತ್ತು ಶರಣರ ಕೆಲವು ವಚನಗಳ ಸೇರಿಸುವಿಕೆಯಿಂದ ವಚನ-ಕಾದಂಬರಿ-ನಾಟಕವೆಂಬಂತೆ ಕಾಲ್ಪನಿಕ ಸಂಗತಿಗಳನ್ನು, ಸನ್ನಿವೇಶಗಳನ್ನು ಅಲ್ಲದೆ ರಂಜಕತೆಯನ್ನು ನಿರ್ಮಿಸಿದ್ದಾನೆ. ಮತ್ತು ಪರಸ್ಪರ ಸಂಭಾಷಣೆ ಸಂಬೋಧನೆ ಮುಂತಾದವುಗಳಿಂದ ಅದನ್ನು ನಾಟಕೀಯವಾಗಿಯೂ ಪರಿವರ್ತಿಸಿದ್ದಾನೆ ಮತ್ತು ನಾಟಕದಲ್ಲಿಯಂತೆ ಆರಂಭದಲ್ಲಿ ವಿಷಯ ಸೂಚನೆ ಮಧ್ಯದಲ್ಲಿ ಅದರ ಉತ್ಕಟತೆ ಮತ್ತು ಕೊನೆಯಲ್ಲಿ ವಿಷಯಾಂತ್ಯವನ್ನು ಮಾಡಿದ್ದಾನೆ.

### E2 ಅಸಂಬದ್ಧತೆ

ಈ ಪುಸ್ತಕವು ಆರಂಭದಿಂದಲೂ ಕುತರ್ಕ ವಿತರ್ಕ ಅಸಂಬದ್ಧ ಪ್ರಲಾಪಗಳೊಂದಿಗೆ ಕೊನೆಯುವರೆಗೆ ಸಾಗಿದೆ. ಇದನ್ನು ವೀರಶೈವ ವಾಙ್ಮಯದ ಇತರ ಸಂಕಲನ ಗ್ರಂಥಗಳೊಂದಿಗೆ ಹೋಲಿಸಿ ನೋಡಿದಾಗ ಇದರ ಬಗ್ಗೆ ಒಳ್ಳೆಯ ಅಭಿಪ್ರಾಯ ಉಂಟಾಗುವುದಿಲ್ಲ. ಪ್ರತಿಯಾಗಿ ತಿರಸ್ಕಾರ ಉಂಟಾಗುತ್ತದೆ. ಏಕೆಂದರೆ ಗ್ರಂಥಕರ್ತನು ತನ್ನ ಹೇಯ ದುಃಶೀಲ ಅಶ್ಲೀಲ ವಿಚಾರಗಳನ್ನು ಶರಣರು ನುಡಿದಿರುವಂತೆ ನಿರೂಪಿಸಿದುದು ಘೋರ ಅಪರಾಧ. ಅಲ್ಲದೆ ವೀರಶೈವ ಧರ್ಮಕ್ಕೂ ಶರಣರಿಗೂ ದ್ರೋಹ. ಇದನ್ನು ರಂಜಕವಾಗಿ ಹಾಗು ಸ್ವಾಭಾವಿಕವಾಗಿ ತೋರುವಂತೆ ಕೃತಕತೆಯನ್ನು ಉಂಟು ಮಾಡಿದುದು ಅಪರಾಧ.

### E3 ನಿರೂಪಣೆ

ಇದರ ಕೃತಕತೆ ಅಸ್ವಾಭಾವಿಕತೆಯು ನಿರೂಪಣೆಯಿಂದಲೇ ಸ್ಪಷ್ಟವಾಗುತ್ತದೆ. ಇದನ್ನು ಕೆಲವು ಉದಾಹರಣೆಗಳಿಂದ ನಿರ್ದಿಷ್ಟಗೊಳಿಸೋಣ. "ಗುರು ಪಾದೋದಕ ಪ್ರಶಂಸೆ" ಎಂಬ ಎರಡನೆಯ ಅಧ್ಯಾಯದಲ್ಲಿ ಗುರು ಇಲ್ಲವೆ

ಪಾದೋದಕ ಪದಗಳು ಇಲ್ಲದ ಅನೇಕ ಸ್ವರಚಿತ ವಚನಗಳು ಇವೆ. ಇವು ವಾಸ್ತವಿಕವಾಗಿ ಮೂರನೆಯದಾದ "ಲಿಂಗಧಾರಣ ಪ್ರಶಂಸೆ" ಅಧ್ಯಾಯದಲ್ಲಿ ಬರಬಹುದಾಗಿತ್ತು ಈ ವಚನ (ಪು. ೧೧ ವ ೧೦) ವು ಲಿಂಗದ ಮಹತ್ವವನ್ನು "ಶ್ರೀಗುರು ಕುರುಹ ಕೈಯಲ್ಲಿ ಕೊಟ್ಟಡೆ ಅರಿವನೆ ಮರೆದು ಕುರುಹನೆ ಪೂಜಿಸುವ ಕುರಿಗಳ ನೋಡಾ" ಉಸುರುತ್ತದೆ. ಅದರಂತೆಯೇ ಮುಂದಿನ ವಚನದಲ್ಲಿಯೂ "ತರ್ಕಕ್ಕೆ ಬಂಧನಕ್ಕೆ ಸಿಕ್ಕದು ವಸ್ತು [ಲಿಂಗ]" ಸಹ. ಇಂತಹ ವಿಕ್ಷಿಪ್ತತೆಯು ಇನ್ನೊಂದು ವಚನ (ಪು. ೧೧ ವ ೧೨) ದಲ್ಲಿ ಕಂಡು ಬರುವುದು. ಇದರಲ್ಲಿ "ಸಿದ್ಧರಾಮಯ್ಯನಾಡಿದುದು ತಪ್ಪು" ಎನ್ನಲಾಗಿದೆ. ಇದಕ್ಕೆ ಪೂರ್ವಾಪರವನ್ನು ಹುಡುಕಲು ಹೊರಟರೆ ಅದು "ಗುರುಪಾದೋದಕ ದಿಂದ ಲಿಂಗ ಮಜ್ಜನ ಮಾಡಬಹುದಲ್ಲದೆ ಬರಿಯ ಉದಕದಿಂದೆರೆಯಬಹುದೆ" (ಪುಟ ೮ ವ ೧) ಎನ್ನಲಾಗಿದೆ. ಇನ್ನು ಮುಂದಿನ ವಚನ ೮೭–೯೦ ಗಳಲ್ಲಿ ಗುರು ಪಾದೋದಕವೆಂಬುದು ಬರಿಯ ಬಾಹ್ಯ ಆಚರಣೆ, ಅದು ಸಲ್ಲದು; ಆದುದರಿಂದ ಪೂಜೆ ಅಂತಃಕರಣಪೂರ್ವಕವಾಗಿರಬೇಕು ಎಂದು ನುಡಿಯ ಲಾಗಿದೆ. ಇದು ಈ ವಾಕ್ಯಗಳಿಂದ–ಹೊರಗನೆ ಕೊಯ್ದು ಹೊರಗನೆ ಪೂಜಿಸಿದಡೆ ಪರಿಣಾಮವಿಲ್ಲ; ಸಜ್ಜನೆಯಾಗಿ ಮಜ್ಜನಕ್ಕೆರೆವೆ; ಸಜ್ಜನವೇ ಮಜ್ಜನ ಸದಾಚಾರವೆ ಧೂಪಾರತಿ— ಸ್ಪಷ್ಟವಾಗುತ್ತದೆ.

## E4 ನಿರರ್ಥಕ

ಈ ಕೆಳಗಿನ ಉದಾಹರಣೆಗಳಿಂದ ನಿರೂಪಣೆಯಲ್ಲಿ ಎಷ್ಟೊಂದು ಅಸಂಬದ್ಧತೆ ಇದೆ, ಹಾಗು ಅದು ನಿರರ್ಥಕವಾಗಿದೆ, ಎಂಬುದು ಕಂಡು ಬರುವುದು.

(೧) ಪುಟ ೧೩ ರಲ್ಲಿ ಬಂದಿರುವ ೧೯–೨೧ ವಚನಗಳು ಪೂರ್ವಾಪರ ಗಳೊಂದಿಗೆ ಆಲೋಚಿಸಿದಾಗ ಅಸಂಬದ್ಧವೆನಿಸುತ್ತವೆ.

(೨) ಪುಟ ೧೬ ರಲ್ಲಿಯ ೩೨ನೆಯ (ಮಡಿವಾಳ ಮಾಚಿದೇವನ) ವಚನವು ಮತ್ತು ಅದರಲ್ಲಿ ಹೇಳಿದುದು "ಬಸವಯ್ಯನಾಡಿದುದು ನಿಜವಲ್ಲ" ಅಸಂಬದ್ಧವಾಗಿದೆ. ಏಕೆಂದರೆ ಬಸವ(ಣ್ಣ)ಯ್ಯನ ವಚನವು ಬಹಳ ಹಿಂದೆ ಏಳನೆಯ

ದಾಗಿ ಬಂದಿದೆ. ಇವೆರಡರ ಮಧ್ಯದಲ್ಲಿ ಚನ್ನಬಸವಣ್ಣ ಪ್ರಭುದೇವ ಮಾರಯ್ಯ ಉರಿಲಿಂಗದೇವ ಅಂಬಿಗರಚೌಡಯ್ಯ ಏಲೇಶ್ವರ ಕೇತಯ್ಯ ಶಿವಲೆಂಕ ಮಂಚಣ್ಣ ಶಿವಪೂಜೆಯ ಭೀಮಯ್ಯ ಮತ್ತು ಮಡಿವಾಳ ಮಾಚಯ್ಯ (ವಚನ ೨೩, ೨೮, ೩೦) ಇವರ ವಚನಗಳು ಬಂದಿವೆ. ಇದರಿಂದ ಬಸವಣ್ಣನ ಯಾವ ಅಭಿಪ್ರಾಯವನ್ನು ಈ ವಚನದಲ್ಲಿ ಖಂಡಿಸಲಾಗಿದೆ ಎಂಬುದು ಸ್ಪಷ್ಟ ವಾಗುವುದಿಲ್ಲ. ಇನ್ನು ಬಸವಣ್ಣನು ಆಡಿದ ಏಳನೆಯ ವಚನವನ್ನು ನೋಡಿ ದರೆ "ಮರನ ಹೂವ ಕೊಯ್ದು ಮರಕೇರಿಸಿ" ಮುಂತಾಗಿರುವುದರಲ್ಲಿ ಖಂಡಿಸುವಂತಹದೇನೂ ಇಲ್ಲ. ಅಲ್ಲದೆ ಇದನ್ನೇ ಖಂಡಿಸುವಂತಿದ್ದರೆ ಇದ-ಕ್ಕಿಂತಲೂ ಪೂರ್ವದಲ್ಲಿ ಉಕ್ತವಾಗಿರುವ ಮಾಚಿದೇವನ ವಚನ ೨೩, ೨೮, ೩೦ ಗಳಲ್ಲಿ ಏಕೆ ಖಂಡಿಸಲಿಲ್ಲ ಎಂಬ ಪ್ರಶ್ನೆಯುಂಟಾಗುತ್ತದೆ. ಆದುದರಿಂದ ಇದು ವಿಸಂಗತವಾಗಿದೆ.

(೩) ಪು೬೯ ವಚನ ೧೮೩ ಇದನ್ನು ಪೂರ್ವಾಪರ ಸಂದರ್ಭಗಳೊಡನೆ ಹೋಲಿಸಿ ನೋಡಿದಾಗ ಇದು ವಿಸಂಗತವಾಗಿದೆ ಎಂದು ಕಂಡು ಬರುವುದು. ಸಂದರ್ಭವು ಚನ್ನಬಸವಣ್ಣನು ಪ್ರಾಣವಿಯೋಗ ಮಾಡಿದಾಗ ಶರಣರು ಪ್ರಲಾಪಿಸುವ ಪ್ರಸಂಗವಾಗಿದೆ. ಈ ವಚನವು ಸಂದರ್ಭಕ್ಕೆ ಯಾವ ಬಗೆ ಯಿಂದಲೂ ಹೊಂದಿಕೊಳ್ಳುವುದಿಲ್ಲ. ಅದರಂತೆಯೇ ವಚನ ೧೮೫-೮ ಗಳು ಸಂದರ್ಭಕ್ಕೆ ಹೊಂದಿಕೊಳ್ಳದೆ ಪ್ರಕ್ಷಿಪ್ತವೆಂಬ ಭಾವನೆಯನ್ನುಂಟು ಮಾಡು ತ್ತವೆ. ಬಹುಶಃ ಇವು ಬಸವಣ್ಣನವರು ಅಂತ್ಯ ಸಮಯದಲ್ಲಿ ಶರಣರನ್ನಗಲಿ ಕಲ್ಯಾಣವನ್ನು ತೊರೆದು ಕೂಡಲಸಂಗಮಕ್ಕೆ ಹೋದಾಗ ನುಡಿದ ವಚನ ಗಳಾಗಿರಬೇಕು.

(೪) ಇದರಂತೆಯೇ ಪು. ೬ ವ. ೨೧ ಹಾಗು ೨೪ ಇವುಗಳನ್ನು ಪೂರ್ವಾ ಪರ ಸಂದರ್ಭದೊಡನೆ ಹೋಲಿಸಿ ನೋಡಿದಾಗ ಪರಕೀಯ ಪ್ರಕ್ಷಿಪ್ತ ಅಸಂಬದ್ಧ ವಿಸಂಗತವಾದವುಗಳೆಂದೇ ಕಂಡು ಬರುವದು. ಇವು ಒಂದು ಸೂತ್ರಬದ್ಧ ವಾಗಿರದೆ ಮಂಗವು ಟೊಂಗೆಯಿಂದ ಟೊಂಗೆಗೆ ಹಾರುವಂತೆ ಇಲ್ಲಿ ವಿಷ-ಯಾಂತರವು ಉಂಟಾಗಿದೆ. ಇನ್ನು ಇದಕ್ಕೂ ವಿಚಿತ್ರವಾದುದನ್ನು ನೋಡೋಣ.

ಪು. ೧೨೩ ವ. ೯೮ಲ ರಲ್ಲಿ "ಗುರು ಗುಹೇಶ್ವರನ ಸಕೀಲನರುಹಾ ಸಿದ್ಧರಾಮಂಗೆ ಚನ್ನಬಸವಣ್ಣಾ" ಹೀಗೆ ಇದೆ. ಅಂದಮೇಲೆ ಇದಕ್ಕೆ ಉತ್ತರವಾಗಿ ಚನ್ನಬಸವಣ್ಣನವರ ವಚನಗಳು ಬರಬೇಕು. ಆದರೆ ಮುಂದಿನ ವಚನ ೯೯-೩೦೦ ಗಳು ಚನ್ನಬಸವಣ್ಣನವಾಗಿರದೆ ಮಡಿವಾಳ ಮಾಚಿದೇವನವು ಆಗಿವೆ.

## E5 ಗತಿ

ಈ ಗತಿಯಿಂದ ಸಾಗಿರುವುದೆಲ್ಲವನ್ನು ನೋಡಿದ ಮೇಲೆ ಪರೀಕ್ಷೆಯಲ್ಲಿ ಅಭ್ಯರ್ಥಿಗಳು ಪುಸ್ತಕಗಳಿಂದ ಕಾಪಿ ಹೊಡೆದಾಗ ಪ್ರಶ್ನೆಗಳಿಗೂ ಉತ್ತರಗಳಿಗೂ ಸಂಬಂಧವಿಲ್ಲದಿರುವಂತೆ ಅಸಂಬದ್ಧವಾಗಿರುವಂತೆ ಈ ಮುಕ್ತಿಕಂಠಾಭರಣ ಪುಸ್ತಕವನ್ನು ಅಭ್ಯಸಿಸಿದಾಗ ಅದರಲ್ಲಿಯ ವಿಸಂಗತಿಯು ಗೋಚರವಾಗುವುದು.

## E6 ಅಸತ್ಯಸಂಗತಿ

ಈ ಪುಸ್ತಕವನ್ನು ಕಾದಂಬರಿಮಯವಾಗಿ ರಂಜಕವಾಗಿ ಕಲ್ಪನಾ ವಿಲಾಸದಿಂದ ರಚಿಸುವ ಉದ್ದೇಶದಿಂದ ಕೆಲವು ಅಸತ್ಯ ಘಟನೆಗಳನ್ನು ಕಲ್ಪಿಸಲಾಗಿದೆ. ಅವು ಯಾವುವೆಂದರೆ–೧. ಚನ್ನಬಸವಣ್ಣನ ಪ್ರಾಣವಿಯೋಗ ೨. (i) ಬಸವಣ್ಣ (ii) ಪ್ರಭುದೇವ (iii) ಸಿದ್ಧರಾಮ (iv) ನೀಲಮ್ಮ (v) ಗಂಗಾಂಬಿಕೆ (vi) ಅಕ್ಕನಾಗಮ್ಮ (vii) ಇತರ ಕೆಲವು ಶರಣೆಯರು ಇವರು ಚನ್ನಬಸವಣ್ಣನ ಪ್ರಾಣವಿಯೋಗದಿಂದಾಗಿ ಪ್ರಲಾಪಿಸಿದ ವಚನಗಳು. ಈ ವಚನಗಳು ನಿಜವಾಗಿ ಆಯಾ ಶರಣ ಶರಣೆಯರವು ಅಲ್ಲ, ಕೃತಕವಾಗಿವೆ. ೩. ಬಾಲಸಂಗನ ವಚನ ಸೃಷ್ಟಿ ೪. ಬಸವಣ್ಣನವರ ದಾಂಪತ್ಯ ಜೀವನ ಕುರಿತು. ಈ ಅನಾಮಧೇಯ ಗ್ರಂಥಕರ್ತನು ಇವುಗಳಿಗೆ ಸಂಬಂಧಿಸುವಂತೆ ವಚನಗಳನ್ನು ರಚಿಸಿ ಅವು ನಿಜವಾದುವೆನ್ನುವಂತೆ ಆಯಾ ಶರಣರ ವಚನಾಂಕಿತಗಳನ್ನು ಅಂಟಿಸಿದ್ದಾನೆ. ಹೀಗೆ ಮಾಡುವುದರಿಂದ ಅವನು ದೂಷಣೆಗೆ ನಿಂದೆಗೆ ಪಾತ್ರನಾಗಿದ್ದಾನೆ.

## E7 ಮತಿ

ಮುಕ್ತಿಕಂಠಾಭರಣ ಗ್ರಂಥದ ಗತಿಯನ್ನು ಪರಾಮರ್ಶಿಸಿದ ನಂತರ ಅದರ ಮತಿಯನ್ನು ಗಮನಿಸುವುದು ಸೂಕ್ತವಾಗಿದೆ. ಈ ದಿಸೆಯಲ್ಲಿ ನಾಡೋಜ

ಪಂಪನ ಉಕ್ತಿ "ನೆನೆವುದೆನ್ನ ಮನಂ ಬನವಾಸಿ ದೇಶಮಂ" ನೆನಪಾಗುತ್ತದೆ. ಇದೇ ವಿಚಾರದ ಸುಳಿಯಲ್ಲಿ ಗ್ರಂಥಕಾರನ ಮನವನ್ನು ಮತಿಯನ್ನು ಗಮನಿಸಿದಾಗ "ನೆನೆವುದೆನ್ನ ಮನಂ ಸ್ತ್ರೀ–ಸಂಗಮಂ ಹಾದರಮಂ" ಎಂಬುದು ಸ್ಪಷ್ಟವಾಗುತ್ತದೆ. ಈ ನೆನಹು ಅಹರ್ನಿಶದಲ್ಲಿ ಅಲ್ಲ; ತ್ರಿಕಾಲದಲ್ಲಿ ಅಲ್ಲ; ಇವೆಲ್ಲಕ್ಕೂ ಮಿಗಿಲಾಗಿ ಜಾಗ್ರತ್, ಸ್ವಪ್ನ, ಸುಷುಪ್ತಿಯಲ್ಲಿ. ಇದರ ಸುಳುಹು "ಪದ್ಮಿನಿಯಲ್ಲಿ ಬೆರಗಾದ ಕಾಮಿಯಂತೆ" (ಪು. ೫೨, ವ. ೧೬) ಎಂಬ ಉಪಮೆಯಿಂದ ದೊರಕುತ್ತದೆ. ಇದರ ನೀತಿಯನ್ನು "....ಅಂತಪ್ಪ ಜಂಗಮ ನಿನ್ನ ಸತಿ ಮುಟ್ಟಿದಡೆ ಪಾವನವಲ್ಲದೆ ಪಾಪಿಯೆ" (ಪು. ೭೫, ವ. ೧೦೬) ಎಂಬುದರಿಂದ ಕಂಡುಕೊಳ್ಳಬಹುದಾಗಿದೆ. ಈ ಮತಿಯನ್ನು ಅದರ ಹೊಳವನ್ನು ಈ ಗ್ರಂಥದಲ್ಲಿ ಸುಸಂಬದ್ಧವಾಗಿ ಪ್ರಸ್ತಾಪಿಸಿದ್ದಾನೆ; ಮತ್ತು ಇದನ್ನು "ಗುಹೇಶ್ವರಲಿಂಗ ತಮ್ಮ ರಾಣಿಯರಿಗರುಹಿದ ರಹಸ್ಯಸಂಜೀವನ ಬೋಧೆ"(ಪು ೨೦,ವ.೪೯)ಎನ್ನಲಾಗಿದೆ.

## E71 ಇಷ್ಟಲಿಂಗ

ಇಷ್ಟಲಿಂಗದಲ್ಲಿ ಅಂತಸ್ಥವಾಗಿ ಒಂದು ಸಾಕಾರ ವಸ್ತುವಿದ್ದರೂ ಅದಕ್ಕೆ ಆರು ಅಂಗಗಳಿದ್ದರೂ ಅವುಗಳಲ್ಲಿ ಮುಖ್ಯವಾಗಿ ಪೀಠ ಗೋಲಕಗಳಿದ್ದರೂ ವೀರಶೈವರಿಗೆ ಇವುಗಳತ್ತ ಗಮನವಿಲ್ಲ. ಅವುಗಳನ್ನು ನಿರ್ಲಕ್ಷಿಸುತ್ತಾರೆ. ಅವರ ಕಣ್ಮನಗಳನ್ನು ಸೆಳೆಯುವುದು ಕಪ್ಪುಕಾಂತಿಯುಕ್ತವಾದ ವಸ್ತು–ಇಷ್ಟಲಿಂಗ. ಇದುವೇ ಶೂನ್ಯ–ಆಕಾರಶೂನ್ಯ, ವರ್ಣಶೂನ್ಯ. ಆದರೆ ಈ ಅನಾಮಧೇಯ ಗ್ರಂಥಕರ್ತನು ಶಾಕ್ತರ ಪರಿಯಲ್ಲಿ ಅಂತಸ್ಥವಾದ ಆಕಾರವುಳ್ಳ ವಸ್ತು, ಅದರ ಶಕ್ತಿಸೂಚಕ ಪೀಠ ಮತ್ತು ಶಿವಸೂಚಕ ಗೋಲಕ ಇವುಗಳನ್ನು ಗಮನದಲ್ಲಿ ತಂದುಕೊಳ್ಳುತ್ತಾನೆ. ಇವುಗಳ ಸಂಯೋಗವೇ ಸಮರಸವೆಂದೆನ್ನುತ್ತಾನೆ. ಇದನ್ನು ಪುಟ ೩ ವಚನ ೧೨ ದಲ್ಲಿ "ಉಭಯ [ ಶಿವಶಕ್ತಿ ]ರ ಸಂಯೋಗದಿಂ ನಿರ್ವಾಣವೆಂದಲ್ಲಿ" ಎಂದು ಉಸುರಿದ್ದಾನೆ.

## E72 ಲಿಂಗ

ವೀರಶೈವರ ಇಷ್ಟಲಿಂಗದ ರಹಸ್ಯವನ್ನು ಅರಿಯದ ಪಾಶ್ಚಿಮಾತ್ಯರು ವೀರಶೈವರ ಲಿಂಗಪೂಜೆಯನ್ನು Phallus worship ಶಿಶ್ನಪೂಜೆ ಎಂದು

ಹೀಗಳೆದಿದ್ದಾರೆ. ವೀರಶೈವರೆಲ್ಲರೂ ಇದನ್ನು ಬಲವಾಗಿ ಖಂಡಿಸಿದ್ದಾರೆ. ಆದರೆ ಈ ಗ್ರಂಥಕರ್ತನು ಆ ವಿಚಾರಧಾರೆಗೆ ಪುರಸ್ಕಾರ ಕೊಡುವಂತೆ ನುಡಿದಿದ್ದಾನೆ. ಇದನ್ನೇ ಮುಂದೆ 'ಆಚಾರ ಪ್ರಶಂಸೆ' ಪ್ರಕರಣದ ವಚನ ೩೨ ರಲ್ಲಿ ಹೀಗೆ "..ಎರಡು ನೇತ್ರಒಂದಾದ ಲಲಾಟನೇತ್ರವೆಂಬ ಭಗನೇತ್ರದಲ್ಲಿ ಇಷ್ಟಲಿಂಗವೆಂಬ ಗುಹ್ಯವನು ಮುಳುಗಿಸುವುದೀಗ..ನೇತ್ರದ್ವಯುಗಳೆಂಬ ಕುಚಂಗಳೆರಡು ಹಿಡಿದುದೀಗ ಲಿಂಗಾಂಗ ಸಮರಸವು....ಚುಂಬನ ಮಾಡಲಿಕ್ಕೆ....ಇದು ಲಿಂಗಾಂಗ ಸಮರಸವು", ನುಡಿದಿದ್ದಾನೆ. ಇದರ ಮುಂದಿನ ವಚನವು "ಎರಡು ನೇತ್ರ ಒಂದಾದ ಭಾಳನೇತ್ರವು ಇಷ್ಟಲಿಂಗಗೋಳಕಕ್ಕೆ ಕೂಟ. ಒಂದು ಲಿಂಗ ಎರಡಾದ ಪ್ರಾಣಲಿಂಗ ಸ್ಥಲಂಗಳಿಗೆ ಎರಡು ನೇತ್ರವು. ಕುಚವ ಪಿಡಿಯಲ್ಕೆ ಈ ಕುಚವೆರಡು ಗುಹ್ಯ ಒಂದು. ಇದು ತ್ರಿಕೂಟವೆಂಬ ಹೆಸರಾಯಿತ್ತು". ಈ ಮೂರು ವಚನಗಳು ಪ್ರಭುದೇವರು ಸಿದ್ಧರಾಮನನ್ನು ಬೋಧಿಸಲಿಕ್ಕೆ ನುಡಿದವು ಆಗಿವೆ. ಈ ವಿಚಾರಗಳು ವೀರಶೈವರವು ಲಿಂಗವಂತರವು ಅಲ್ಲ. ಇದು ವಾಮಮಾರ್ಗದ ಶಾಕ್ತರ ಅನುಕರಣೆಯಾಗಿದೆ. ಇದು ಕಾಮುಕ ಅನಾಮಧೇಯ ಲೇಖಕನ ಕೀಳು ಮನ, ಹೇಸಿ ಮನ, ದುಶ್ಶೀಲಗಳನ್ನು ಪ್ರತಿಬಿಂಬಿಸುತ್ತದೆಯೇ ಹೊರತು ವೀರಶೈವವನ್ನಲ್ಲ.

## E73 ಪ್ರಮಾಣ

ಈ ತರಹದ ವಿಚಾರವನ್ನು ಆಚರಣೆಯನ್ನು ಪ್ರಮಾಣವಾಗಿಸಲು ಏನೋ ಅನ್ನುವಂತೆ ಮಾಚಿದೇವರ ಬಾಯಿಂದ ".... ಪರಸ್ತ್ರೀ ಸಂಗ .... ಇಷ್ಟಲಿಂಗ ಸಿದ್ಧಿ,.... ಪರಸ್ತ್ರೀಕಾಂಕ್ಷೆ.... ಪ್ರಾಣಲಿಂಗಸಿದ್ಧಿ,.... ನಿಜಸ್ತ್ರೀ ಸಂಗ ರತಿಕಾಂಕ್ಷೆ.... ಭಾವಲಿಂಗಸಿದ್ಧಿ...." ನುಡಿಸಿದುದಾಗಿದೆ. ಇದು ವಾಮ ಮಾರ್ಗದ ಶಾಕ್ತರನ್ನು ಸಹ ಮೀರಿಸಿದುದು ಆಗಿದೆ. ಇಲ್ಲಿ ಹೇಳಿದ ಪರಸ್ತ್ರೀ ಸಂಗ ಪ್ರಯುಕ್ತವಾಗಿ ಹಾದರವನ್ನು ನಿಷಿದ್ಧವೆಂದೆನಿಸದೆ ಮಾನ್ಯವೆಂಬ ವಿಚಾರವನ್ನು 'ಆಚಾರ ಪ್ರಶಂಸೆ' ಪ್ರಕರಣದ ಕೊನೆಯಲ್ಲಿ ಪ್ರಭುದೇವರ ಬಾಯಿಂದ ನುಡಿಸಲಾಗಿದೆ– "ಹಾದರವಾಡದಿರೆ ಶಿವನ ಪೂಜೆಯದೇಕೋ ಪಾತಕವ ಮಾಡದಿರೆ ಪರಮನ ಅರ್ಚನೆಯದೇಕೊ. ಹಾದರವಾಡಿ ಹರನನರ್ಚಿಸಿದಡೆ ದೋಷವಿಲ್ಲೆಂದ ನಮ್ಮ

ಗುಹೇಶ್ವರಲಿಂಗವು" (ವ. ೫೩೪). ಈ ವಿಚಾರಕ್ಕೆ ಶರಣರೆಲ್ಲರ ಪ್ರತಿರೋಧ ಉಂಟಾಗಲು ಹಾವೇರಿ ನ್ಯಾಯ compromise ಮಾಡಿದಂತೆ "ಒಬ್ಬನಿಚ್ಚೆ ಸ್ತ್ರೀಗತವಾಗಿಪ್ಪುದು; ಒಬ್ಬನಿಚ್ಚೆ ಸ್ತ್ರೀವಿಗತವಾಗಿಪ್ಪುದು" (ವ. ೫೫೩) ಹೇಳಲಾಗಿದ್ದರೂ 'ಸಂಗನ ಬಸವಯ್ಯನಾಜ್ಞೆ ಮಸಿಯಾಯಿತ್ತಲ್ಲ' ಎಂದು ಹಂಗಿಸಿ ನುಡಿದುದು ಬಸವಣ್ಣನವರ ಪರಸ್ತ್ರೀಯರ ಕುರಿತಾದ ಆಚಾರವನ್ನು ಖಂಡಿಸಿದಂತಾಗಿದೆ.

## E74 ಖಂಡನೆ

ಆದುದರಿಂದ ಈ ಗ್ರಂಥವು ಖಂಡನೀಯವಾಗಿದೆ, ದೂಷಣೀಯವಾಗಿದೆ, ನಿಂದನೀಯವಾಗಿದೆ. ಏಕೆಂದರೆ ಇದರ ವಿಷಯವು ದುಶ್ಶೀಲ, ಅಶ್ಲೀಲ, ದುರ್ಭಾವ ದುರ್ನಡತೆ ಇವುಗಳ ಸುತ್ತ ಪರಿಭ್ರಮಣ ಮಾಡುತ್ತದೆ, ದುರ್ಬೋಧೆ ನೀಡುತ್ತದೆ, ದುರ್ನಡತೆಯನ್ನು ಪ್ರೋತ್ಸಾಹಿಸುತ್ತದೆ. ಇವುಗಳನ್ನೇ ಪ್ರಶಂಸನೀಯ ಆಚಾರ "ಆಚಾರ ಪ್ರಶಂಸೆ" ಎಂಬುದಾಗಿ ನಿರ್ದೇಶಿಸಲಾಗಿದೆ. ಅಲ್ಲದೆ ವೀರಶೈವರ (ಲಿಂಗವಂತರ) ಆಚಾರ, ವಿಚಾರ ರೀತಿ ನೀತಿ ನಡತೆಗಳನ್ನು ಅನುಭಾವವನ್ನು ಅಸಹ್ಯಗೊಳಿಸುತ್ತದೆ, ನಿಂದಿಸುತ್ತದೆ; ಅರ್ಥಾತ್ ಲಿಂಗವಂತ ಧರ್ಮವನ್ನು ಹೀಯಾಳಿಸುತ್ತದೆ, ಅವಹೇಳನಗೊಳಿಸುತ್ತದೆ ಎನ್ನಲೂ ಬಹುದು. ಹೀಗಿರುವಾಗ ಇದರ ಸಂಪಾದಕರು ಈ ಗ್ರಂಥದ ಗುಣದ ಕುರಿತು "ವೀರಶೈವ ಧರ್ಮ ತತ್ವಗಳ ವಿವರಣೆ ದೃಷ್ಟಿಯಿಂದ ಇದು ಮಹತ್ವವಾದುದು" ಎಂಬಂತೆ ನುಡಿದುದು ಯಥಾರ್ಥವಾಗಿರದೆ ವಿಕಟ ಅಟ್ಟಹಾಸವಾಗಿದೆ. ಇದು ಸಂಪಾದಕರ ಅಜ್ಞಾನ ಇಲ್ಲವೆ ದುರ್ನೀತಿ, ದುರ್ಬುದ್ಧಿಗಳ ಪ್ರತೀಕವೆನ್ನಬಹುದಾಗಿದೆ. ಇವರ ಪೀತದೃಷ್ಟಿಗೆ ಎಲ್ಲವೂ ಚಿನ್ನವೆಂದು ಕಂಡುಬರುವಂತೆ ಕಾಣುತ್ತದೆ.

## E75 ತೆರೆ

ಮೇಲೆ ಹೇಳಿದುದು ಗ್ರಂಥಕರ್ತನ ಉದ್ದೇಶ ವಿಚಾರಗಳನ್ನು ನಿದರ್ಶಿಸುತ್ತಿದ್ದರೂ ಅದಕ್ಕೆ ತಾನೇ ನಾಚಿಕೊಂಡೋ, ಹೇಸಿಕೊಂಡೋ ಎನ್ನುವಂತೆ ಅಥವಾ ತನ್ನ ದುರುದ್ದೇಶ ದುರ್ಭಾವನೆಗಳನ್ನು ಮರೆಮಾಚಿಸಲು ಎನ್ನುವಂತೆ ಪರಸ್ತ್ರೀಸಂಗಕ್ಕೆ ವಿರೋಧವಾದ ವಚನಗಳನ್ನು ಹೇಳಿದ್ದಾನೆ. ಆದರೆ ಅವೆಲ್ಲ

ಗೌಣವಾಗಿವೆ ಮತ್ತು ಮೇಲೆ ಹೇಳಿದುದು ಪ್ರಾಧಾನ್ಯವೆಂಬ ಅರ್ಥ ಭಾವಗಳು ಒಡಮೂಡಿವೆ. ತೆರೆಯ ಮರೆಯಲ್ಲಿರುವ ವಚನಗಳ ಸಾರಾಂಶವು ಇದಾಗಿದೆ.—

(೧) ದೇವರ ದಾಸಿಮಯ್ಯನ ವಚನ "ಪರವಧುವ ನೆರೆಯದೆ ಪರಧನವ ತುಡುಕದೆ" ಎಂಬುದು ಪೂರ್ವಾಪರಸಂಬಂಧವಿಲ್ಲದೆ ಅಕಸ್ಮಾತ್ತಾಗಿ ಉಕ್ತವಾಗಿದೆ;

(೨) ಮಡಿವಾಳ ಮಾಚಿದೇವನು ಹಿಂದೆ ಹೇಳಿದ ವಚನದಲ್ಲಿ ಸ್ತ್ರೀಸಂಗಕ್ಕೆ ಇಷ್ಟಲಿಂಗಸಿದ್ಧಿ, ಭಾವಲಿಂಗಸಿದ್ಧಿ, ಪ್ರಾಣಲಿಂಗಸಿದ್ಧಿ ಇವುಗಳ ಸಂಬಂಧ ಕಲ್ಪಿಸಿದ್ದರೂ ಅದಕ್ಕೆ ವಿರೋಧವಾಗಿರುವ ಹೇಳಿಕೆಗಳು ಇತರ ವಚನಗಳಿಂದ ಕಂಡುಬರುತ್ತಿವೆ. ಪು. ೨೨ ವ. ೫೪ ದಲ್ಲಿ "ತ್ರಿಕರಣ ಶುದ್ಧವಾಗಿ ಜಿತೇಂದ್ರಿಯತ್ವವು" ಸಮರಸಜ್ಞಾನಕ್ಕೆ ಅವಶ್ಯವೆಂದಿದ್ದಾನೆ. ಇದೇ ಭಾವನೆಯ ಜಾಡು ಹಿಡಿದು ಪುಟ ೬೪, ವ ೫೪ ದಲ್ಲಿ "ಕಮಲಕ್ಕೆರಗುವ ಭ್ರಮರ ಕನಕದ ತನುವಿಂಗೆರಗುವುದೇ" ಎಂದು ಆಲಂಕಾರಿಕವಾಗಿ ನುಡಿದಿದ್ದಾನೆ. ಇದನ್ನೇ ಮುಂದಿನ ವಚನದಲ್ಲಿ "ಶಿವಶರಣರು ತಮ್ಮಂಗನೆಯರ ಭೋಗಿಸಕೂಡದು" ಎಂದು ಸ್ಪಷ್ಟವಾಗಿ ನುಡಿಯಲಾಗಿದೆ;

(೩) ಚನ್ನಬಸವಣ್ಣನು 'ಆಚಾರ ಪ್ರಶಂಸೆ' ಪ್ರಕರಣಕ್ಕೆ ನಾಂದಿಯಾಗಿ ಬಂದಿರುವ ವಚನ ೨ ರಲ್ಲಿ "ಶಿವಾಚಾರಿ ನೀನಾಗಬೇಕೆಂಬಿಚ್ಛೆ ತೋರ್ದಡೆ.... ಬಿಡುವುದಯ್ಯಾ ಸ್ತ್ರೀಸಂಸರ್ಗವ" ಎಂದು ಸಿದ್ಧರಾಮನಿಗೆ ಬೋಧಿಸಿದ್ದಾನೆ. ವಚನ ೧೫೪-೫ ರಲ್ಲಿ ಪರಸತಿ ಸಂಗವ ತೊರೆಯಬೇಕು ಎಂದಿದ್ದಾನೆ. ಮುಂದೆ ವಚನ ೧೬೧ ರಲ್ಲಿ ಎಂತಹವರ ಅನ್ನವು ಅಮೇಧ್ಯವೆಂದು ಹೇಳುವಾಗ "ಪರಾಂಗನೆಯರ ರತಿಮನಲೀನನೋರ್ವ" ಎಂದಿದ್ದಾನೆ. ವಚನ ೫೩೩ ರಲ್ಲಿ "ಲಿಂಗವ ಪೂಜಿಸಿದಡೇನು ಹಾದರ ಮಾಡಿದವನ ಪೂಜೆ ಹಾಳುಮನೆಯ ದೀಪ" ಎಂದುಸುರಿದ್ದಾನೆ.

ಆದರೇನು, ಹೊಳೆಯಲ್ಲಿ ಹುಣಿಸೆಯು ತೊಳೆದಂತೆ ಇಲ್ಲವೆ ಗ್ರಂಥಕರ್ತನ ಉಪಮೆಯಲ್ಲಿ ಹೇಳುವುದಾದರೆ 'ಹೋಮದಲ್ಲಿ ಕತ್ತೆ ಮೂತ್ರ ಬಿಟ್ಟಂತೆ' ಈ

ವಚನಗಳಲ್ಲಿ ಹೇಳಿರುವುದನ್ನು ನಿರರ್ಥಕಗೊಳಿಸಿ, ಈ ತೆರೆಯ ಹರಿದು ಕೊನೆಯಲ್ಲಿ ಈ ವಿಷಯದ ನಿರ್ಣಯ ನಿಷ್ಪತ್ತಿ ಎಂಬಂತೆ "ಹಾದರ ಮಾಡಿ ಹರನ ಪೂಜಿಸಿದಡೆ ದೋಷವಿಲ್ಲೆಂದು" ನಿಷ್ಕರ್ಷೆಯಾಗಿದೆ, ಅಂತೆಯೆ ಸಾರಲಾಗಿದೆ.

## E76 ಉದ್ದೇಶ

ಆಕ್ಷೇಪಣೀಯವಾದ, ನೀತಿಗೆ ವಿರುದ್ಧವಾದ ಅಶ್ಲೀಲವಾದ ವಿಚಾರಗಳನ್ನು ಹೇಳುವುದರಲ್ಲಿ ಗ್ರಂಥಕರ್ತನ ಉದ್ದೇಶವನ್ನು ಕಂಡುಕೊಳ್ಳುವುದು ಸಮಂಜಸವಾಗಿದೆ. ಇದನ್ನು ಕಂಡುಕೊಳ್ಳಲಿಕ್ಕೆ ಬಹು ಪ್ರಯಾಸ ಪಡಬೇಕಾಗಿಲ್ಲ. ಊಹೆ ಅನುಮಾನಗಳಿಗೆ ಮೊರೆ ಹೋಗಬೇಕಾಗಿಲ್ಲ. ಇದು ಗ್ರಂಥದಲ್ಲಿಯೇ ವ್ಯಕ್ತವಾಗಿದೆ. ಇದು ವಚನ ೨೦.೪೯ ದಲ್ಲಿ ಕಂಡು ಬರುವುದು. ಇದು ಹೀಗಿದೆ. "....ಇಂತಪ್ಪ ಬೋಧೆ ಇಂದ್ರಜಾಲದಾಟವಲ್ಲ, ವೇದವಿಹಿತಜ್ಞಾನವಲ್ಲ, ಆಗಮಭರಿತ ನುಡಿಯಲ್ಲ, ಗುಹೇಶ್ವರಲಿಂಗ ತಮ್ಮ ರಾಣಿಯರಿಗರುಹಿದ ರಹಸ್ಯ ಸಂಜೀವನ ಬೋಧೆ". ಇಲ್ಲಿ ರಾಣಿಯರು ಎಂಬ ಪದವು ವಚನ ೨೫೧ ದಲ್ಲಿ ಹೇಳಿದ 'ಮಿಂಡಿಯರು' ಪದಕ್ಕೆ ಸಮಾನ ಭಾವವುಳ್ಳದ್ದಾಗಿದೆ. ಇಂತಹರಿಗೆ ರಹಸ್ಯದಲ್ಲಿ ಬೋಧಿಸಿದುದು ಆಗಿದೆ. ಅಂದರೆ ಮುಗ್ಧೆಯರನ್ನು ಅವರ ಮನ (brain wash) ತಿರುಗಿಸಿ ದುರ್ಮಾರ್ಗಕ್ಕೆಳಸುವುದು ಆಗಿದೆ. ಆದುದರಿಂದ ಇದು (ಈ ಅಂಗಲಿಂಗದ ಸಮರಸಬೋಧೆ) ಇತರರಿಗೆ ನಿಷಿದ್ಧ—ಕೆಲವು ಸಿನೇಮಾಗಳು ವಯಸ್ಕರಿಗೆ ಮಾತ್ರವಿರುವಂತೆ—ಆಗಿದೆ. ಈ ನಿಷೇಧದ ಕಟ್ಟನ್ನು ಮುರಿದುದಾದರೆ— ಆ್ಯಡ್ಯಾಮನ ನಿಷಿದ್ಧ ಹಣ್ಣನ್ನು ತಿಂದುದಾದರೆ— ಅಂದರೆ ಪಾತಕರಿಗೆ ಅರುಹಿದೊಡೆ ಸಕಲ ನಾಯಕನರಕಂಗಳಾಗುವವು ಎಂದು ಗ್ರಂಥಕರ್ತನು ಶಪಿಸಿದ್ದಾನೆ. ಇದರಿಂದ ಗ್ರಂಥಕರ್ತನು ಇದು ರಹಸ್ಯವಾದುದು ಹಾಗು ತನ್ನ ಸಹಚರರಿಗೆ ಸಮಾನ ಶೀಲ (ವ್ಯಸನಿ)ರಿಗೆ ಮಾತ್ರ ಹೇಳುವಂಥಾದ್ದು ಎಂದು ಕಟ್ಟುಪಾಡನ್ನು ಹಾಕಿದ್ದಾನೆ. ಆದರೆ ಪ್ರಸ್ತುತ ಸಂಪಾದಕರು ಇಂತಹ ನಿಷಿದ ರಹಸ್ಯವನ್ನು ಭೇದಿಸಿ ಪ್ರಕಟಗೊಳಿಸಿ ಪಾಪಕಾರ್ಯ ಮಾಡಿದ್ದಾರೆ.

## E77 ದೃಷ್ಟಿಕೋನ

ಸಂಸಾರ ಸಂಬಂಧವಾದ ನೀತಿಯನ್ನು ನಡತೆಯನ್ನು, ವೀರಶೈವರ ಜೀವನದ ಗುರಿಯಾದ ಐಕ್ಯಸಾಧನೆಯ ದೃಷ್ಟಿಯಿಂದ ಈ ಗ್ರಂಥದಲ್ಲಿ ಹಲವು ಮುಖಗಳಿಂದ ನಿರೂಪಿಸಿದಂತೆ ಕಂಡುಬರುವದು. — ( i ) ಸ್ತ್ರೀಯರ ಸಂಗ (ಸಂಸಾರ)ವನ್ನು ಹೊಂದದಿರುವುದು ಉತ್ತಮ ( ii ) ಸಂಸಾರಿಗನಾಗಿದ್ದರೂ ಅವಕ್ಕೆ ಕಾಲಮರ್ಯಾದೆ ಇರಬೇಕು. ಅಂದರೆ ಕೆಲವು ವರ್ಷಗಳ ನಂತರ ಸ್ತ್ರೀ ಸಂಸರ್ಗವನ್ನು ಬಿಡಬೇಕು (iii) ಸ್ವ ಸ್ತ್ರೀ ಸಂಗವನ್ನು ಅಂದರೆ ಸಂಸಾರವನ್ನು ತ್ಯಜಿಸಬೇಕಾದುದಿಲ್ಲ (iv) ಪರಸ್ತ್ರೀ ಸಂಗ ಸರ್ವಥಾ ಸಲ್ಲದು. ಇವೆಲ್ಲ ವಿಚಾರಗಳು ಅಲ್ಲಲ್ಲಿ ಹೊಳೆದಿರುವವಾದರೂ ಅವುಗಳಿಗೆ ವಿರೋಧವಾಗಿ ಸಾಮಾಜಿಕ ನೀತಿ ನಿಯಮುಗಳಿಗೆ ವ್ಯತಿರಿಕ್ತವಾಗಿ ಮತ್ತು ಕಲಂಕ ಹಚ್ಚುವಂತೆ ಪರಸ್ತ್ರೀ ಸಂಗ,ಹಾವರ ನಿಷಿದ್ಧ ವಲ್ಲವೆಂದು ಗ್ರಂಥದ ಕೊನೆಯಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ. ಇದು ಗ್ರಂಥಕರ್ತನ ದುರ್ಬೋಧೆ ದುರ್ನೀತಿ ದುರಾಚಾರ ದುಃಶೀಲಗಳ ಪ್ರತೀಕವಾಗಿದೆ. ಅಂತೆಯೆ ಇದು ಒಂದು ಹೇಯ ಹೀನ ತಿರಸ್ಕರಣೀಯ ಕೃತಿಯಾಗಿದೆ.

## E78 ಸಾಫಲ್ಯ

ಈ ದುರ್ಬೋಧೆಗೆ ದುರಾಚಾರಕ್ಕೆ ಮನ್ನಣೆ ಪಡೆಯಲು ಗ್ರಂಥಕರ್ತನು ಎಂತಹ ದುಸ್ಸಾಹಸವನ್ನು ಮಾಡಿದ್ದಾನೆ ಎಂಬುದನ್ನು ಪರಿಶೀಲಿಸುವುದು ಅಗತ್ಯವಾಗಿದೆ. ಇಂತಹವಕ್ಕೆ ಪರಮಶತ್ರು ಬಸವಣ್ಣ; ಏಕೆಂದರೆ ಅವನು ' ಪರಸತಿಯರನು ಮಹಾದೇವಿ ' ಎಂಬ ಆಚಾರ ವಿಚಾರದವನು. ಆದುದರಿಂದ ಬಸವಣ್ಣನನ್ನು ಹೀನಾಯಮಾನವಾಗಿ ಜರೆದರೆ ಕಾರ್ಯವಾಯಿತು ಎಂದು ಭಾವಿಸಿ ಬಸವಣ್ಣನನ್ನು ದೀರ್ಘವಾಗಿ ನಾನಾ ಪರಿಯಾಗಿ–ಅದೂ ಪ್ರಭುದೇವರ ಬಾಯಿಂದ–ಹೀಯಾಳಿಸಿದ್ದಾನೆ. ಅದು ಇಂತು ಇದೆ.–"ಭಂಡ ಬಸವನ ಮುಖವ ನೋಡಲಾಗದು ಗುಹೇಶ್ವರಾ "(೧೦೬); "ತಮ್ಮ ಮಾಯೆ ತಾವು ಮುಟ್ಟದಡೆ ನಿನ್ನ ಸೊಕ್ಕೆಂತೋ ಗುಹೇಶ್ವರ ದೂರ ಬಸವ " (೧೦೭); " ಆಡುವುದ ಹೇಳದರಾರು ಆಡಿ ನಿಂದಿಸ ಹೇಳಿದರಾರು ಗುಹೇಶ್ವರ ದೂರ ದುಷ್ಟ ಬಸವಾ"(೧೦೮);

"ಹುಳ ಬಿದ್ದ ಶ್ವಾನನಂತೆ ಬೊಗಳಿ ಬೋಳಾದಿಯಲ್ಲ ಗುಹೇಶ್ವರದೂರ ಬಸವಾ" (೧೦೯); "ಎಮ್ಮ ಗುಹೇಶ್ವರ ಕರುಣಿಸಿದ ಮರೆದೆಯಲ್ಲಾ ಭ್ರಷ್ಟ ಬಸವಾ" (೧೧೦); "ಗುಹೇಶ್ವರ ದೂರ ಭ್ರಷ್ಟ ಬಸವಾ" (೧೧೧); "ಇಂದು ನುಡಿದ ನುಡಿಗಳು ಗುಹೇಶ್ವರಲಿಂಗದ ರೋಮ ರೋಮಕ್ಕೆ ಮಸೆದಲಗಿನ ತಪ್ತ ತಾಪವಾಯಿತ್ತಲ್ಲ ಭ್ರಷ್ಟ ಬಸವಾ" (೧೧೨); "ಸಾಕು ಸಾಕು ನಿನ್ನ ಪೂಜೆ ನಿನ್ನ ಭಕ್ತಿ ಗುಹೇಶ್ವರಲಿಂಗಕ್ಕೆ ಭ್ರಷ್ಟ ಬಸವಾ" (೧೧೫); "ನಿನ್ನ ಭಕ್ತಿ ಹಾಲಾಹಲ ಉಗ್ರ ವಿಷವಾಯಿತ್ತಲ್ಲಾ ಗುಹೇಶ್ವರಲಿಂಗಕ್ಕೆ ಭ್ರಷ್ಟ ಬಸವಾ" (೧೧೬). ಇವುಗಳು ಬಸವಣ್ಣನವರ ವ್ಯಕ್ತಿತ್ವ ಹನನದ ಕುರಿತಾದ ನುಡಿಗಳಾಗಿದ್ದರೆ, ವಚನ ೧೦೫ದಲ್ಲಿ ಅವರ ಕಾರ್ಯದ ಹನನವು "ಮೂವತ್ತಾರು ವರುಷ ಮಾಡಿದ ಭಕ್ತಿ ಹೋಮದಲ್ಲಿ ಕತ್ತೆ ಮೂತ್ರ ಬಿಟ್ಟಂತಾಯಿತ್ತಯ್ಯಾ ಬಸವನ ನುಡಿ ಇದೇತರ ಅನುಭವ ಇದೇತರ ಭಕ್ತಿ, ಗುಹೇಶ್ವರ ಶರಣರ ಕೂಳಸೊಕ್ಕು ತಲೆಗೇರಿದುದ ಒರಸುವ ಚದುರಕಾಣಾ ಕಿನ್ನರಯ್ಯಾ", ಸಹ ಆಗಿದೆ.

(೨)

ಇದಲ್ಲದೆ ಇನ್ನಿತರ ಕಡೆಗೂ ಬಸವಣ್ಣನನ್ನು ದುರುದ್ದೇಶಪೂರ್ವಕವಾಗಿ ಜರೆದಿರುವ ಮಾತುಗಳು ಬಂದಿವೆ.—( i ) "ಬಸವಯ್ಯ ನಾಡಿದುದು ನಿಜವಲ್ಲ. ಆತ ತಳವಿಲ್ಲದ ಮಗಿಯು" (ಪು. ೧೬, ವ. ೩೨ ಮಡಿವಾಳ). ಇದರ ಪೂರ್ವಾಪರವನ್ನು ನೋಡಿದರೆ ಹೀಗೆ ನುಡಿದುದು ನಿಷ್ಕಾರಣವೆನಿಸುತ್ತದೆ. ( ii ) "ಅಂತರಂಗ ಬಹಿರಂಗ ಆತ್ಮಸಂಗ ಒಂದೆ ಎಂಬ ಬಸವನ ನುಡಿ ಕಸವಾಯಿತ್ತಲ್ಲ" (೩೯೫ ಪ್ರಭುದೇವ), ಇಲ್ಲಿಯೂ ಸಹ ಹೀಗೆ ನುಡಿದುದಕ್ಕೆ ಪೂರ್ವಸಂಬಂಧವು ಕಂಡುಬರುವುದಿಲ್ಲ. ಇದರ ಹಿಂದೆ ಬಸವಣ್ಣನ ವಚನವು ೨೮೩ ರಲ್ಲಿ ಬಂದಿದೆ. ಆದರೆ ಅದರಲ್ಲಿ "ತಾನಾರೆಂಬುದು ಸಾಧಿಸಬಾರದು ಕೂಡಲಸಂಗಮದೇವರ ಕರುಣವುಳ್ಳವಂಗಲ್ಲದೆ" ಎಂದಿದೆ. ಈ ಅಸಂಬದ್ಧತೆಯನ್ನು ಪರಿಹರಿಸುವುದಕ್ಕಾಗಿ ಮುಂದೆ 'ಗದ್ಯ ಉದಾಹರಣ ನಿಮಿತ್ತ' ಎಂದು ನುಡಿದು ಬಸವಣ್ಣನವರ ವಚನ (೩೬೦) "ಅಂತರಂಗ ಬಹಿರಂಗ ಆತ್ಮಸಂಗ

ವೊಂದೆ ಅಯ್ಯಾ.... ಆರೂಢದ ಕೂಟದ ಸುಖವ ಕೂಡಲ ಸಂಗಯ್ಯ ತಾನೆ ಬಲ್ಲ" ಎಂಬುದನ್ನು ಕೊಡಲಾಗಿದೆ. ಇದು ಎಷ್ಟು ಅಸಂಬದ್ಧ ಹಾಗು ಕೃತ್ರಿಮವಾಗಿದೆಯೆಂಬುದು ಸ್ಪಷ್ಟವಿದೆ. (iii) ಗ್ರಂಥದ ಕೊನೆಯಲ್ಲಿ "ಸಂಗನ ಬಸವಯ್ಯನಾಜ್ಞೆ [ಹಾದರವನ್ನು ದೋಷವಿಲ್ಲೆಂದು ಪ್ರತಿಪಾದಿಸುವ ಮೂಲಕ ಬಸವಣ್ಣನವರ ವಾಕ್ಯ 'ಛಲಬೇಕು ಶರಣಂಗೆ ಪರಧನವ ಪರಸತಿಯ ನೊಲ್ಲೆನೆಂಬಲ್ಲಿ' ಎಂಬ ಪ್ರತಿಜ್ಞೆ] ಮಸಿಯಾಯಿತ್ತಲ್ಲ" ಎಂದು ಹೇಳಿ ಬಸವಣ್ಣನನ್ನು ತಿರಸ್ಕರಿಸಿದ್ದಾನೆ.

## E79 ತೆರೆಮರೆ

ಗ್ರಂಥಕರ್ತನು ಹಾದರದ ಮಾತುಗಳ ಬಗ್ಗೆ ತೆರೆಯನ್ನು ಉಪಯೋಗಿಸಿದ್ದರೆ ಬಸವಣ್ಣನವರನ್ನು ಬಾಯಿಗೆ ಬಂದಂತೆ ಬೈದಿರುವುದನ್ನು ಮರೆಮಾಚಲು ತೆರೆಮರೆಯನ್ನು ಬಳಸಿದ್ದಾನೆ. ಅಂದರೆ, ಬಸವಣ್ಣನವರ ಬಗ್ಗೆ ಕೆಲವೆಡೆಗಳಲ್ಲಿ ಒಳ್ಳೆಯ ಮಾತುಗಳು ಬಂದಿವೆ. ಅವು ಹೀಗಿವೆ.—

( i ) "ಪುಣ್ಯಪುರುಷರಿರವ ಗುಹೇಶ್ವರಶರಣಸಂಗನಬಸವಣ್ಣಂಗೆ ಬೆಸಗೊಂಬ ಬಾರಾ ಸಿದ್ಧರಾಮಯ್ಯಾ (II ೫೧ ಪ್ರಭು)

( ii ) "ಅಂಗಲಿಂಗಸಮರಸವೇದ್ಯ ಸಂಗನಬಸವಯ್ಯ ಬಲ್ಲ" (II ೯೧ ಪ್ರಭು).

( iii ) ಇವರಂತರಂಗಸಂಗ ಇದರ ಬಹಿರಂಗ ಗುಹೇಶ್ವರಶರಣ ಬಸವಂಗೆ ಬೆಸಗೊಂಬ ಬಾರಾ ಸಿದ್ಧರಾಮಯ್ಯಾ" (III ೮ ಪ್ರಭು) ಈ ಸಂಬಂಧದಲ್ಲಿ ವಚನ ೩೫ ರಲ್ಲಿ ಬಸವಣ್ಣನ ಈ ಅಭಿಪ್ರಾಯವನ್ನು ಖಂಡಿಸಲಾಗಿದೆ ಎಂಬುದನ್ನು ಗಮನಿಸುವುದು ಅಗತ್ಯ.

( iv ) "ಸುವಿಚಾರ ಭಕ್ತಿಯ ನಿಲುಕಡೆ ಸಂಗನಬಸವಣ್ಣ ಬಲ್ಲ" ( IV ೨೪ ಪ್ರಭು ).

( v ) "ಮಾಡಿದ ದೂಷಣೆಗೆ ಶಾಂಭವಿ ಕೋಣೆಗೆ ಶಂಭು ಬಸವನ ಧ್ಯಾನವೆ ಪ್ರಾಯಶ್ಚಿತ್ತ ಕಾಣಾ" (೧೩೧ ಪ್ರಭು).

(vi) "ಸಕಲ ಭ್ರಮೆಯನೆ ಜರಿ(ರೆ)ದು ಗುಹೇಶ್ವರಲಿಂಗದಲ್ಲಿ ಬಸವಣ್ಣನೊಬ್ಬನೆ ಪ್ರಸಾದಿ" (೨೬೦, ೩೬೪ ಪ್ರಭು).

ಈ ಪರಿಯಾಗಿ ಒಳ್ಳೆಯ ಮಾತುಗಳನ್ನು ಅಲ್ಲೊಂದು ಇಲ್ಲೊಂದು ಆಡಿದ್ದರೆ ಇವುಗಳನ್ನು ಬಸವಣ್ಣನನ್ನು ಜರೆಯಲಾಗಿರುವ ದುಷ್ಟ ಮಾತುಗಳೊಂದಿಗೆ ಹೋಲಿಸಿ ನೋಡಿದರೆ 'ಇದಾವ ಗಿಡದ ತೊಪ್ಪಲು' ಎಂಬ ಗೌಣ ಭಾವನೆಯು ಈ ಪ್ರಶಂಸಾಪರ ಮಾತುಗಳ ಬಗ್ಗೆ ಉಂಟಾಗುತ್ತದೆ. ಅಲ್ಲದೆ, ಅಭಿಪ್ರಾಯ ಭೇದವಾದ ಪ್ರಸಂಗಗಳಲ್ಲಿ ಚನ್ನಬಸವಣ್ಣ ಸಿದ್ಧರಾಮರಿಗೆ ಆಡಿದ ಮಾತು ಗಳೊಂದಿಗೆ — (1) ಚನ್ನಬಸವಯ್ಯನಾಡಿದುದು ತಪ್ಪು (IV ೨೮೪) (2) ಸಿದ್ಧರಾಮಯ್ಯನಾಡಿದುದು ತಪ್ಪು (II ೧೨) ಹೋಲಿಸಿ* ನೋಡಿದಾಗ ಇದೇ ಭಾವನೆಯು ಬಲಗೊಳ್ಳುತ್ತದೆ. ಈ ಸಂಬಂಧದಲ್ಲಿ ಇನ್ನೂ ಒಂದು ಸಂಗತಿಯು ಈ ದಿಶೆಯಲ್ಲಿ ಬೆಳಕು ಚಲ್ಲುತ್ತದೆ. ಅದು ಯಾವುದೆಂದರೆ ಗುರುವಿನ ದೂಷಣೆಯ ನುಡಿ ಕೇಳಿ ಚನ್ನಬಸವಣ್ಣನು ಪ್ರಾಣವಿಯೋಗ ಮಾಡಿದಾಗ ಪ್ರಭುದೇವರು ನುಡಿದುದು ಆಗಿದೆ. ವಚನ ೨೨೯ ರಲ್ಲಿ ಚನ್ನಬಸವಣ್ಣನ ಪ್ರಾಣವನ್ನು ಪುನಃ ಪಡೆಯುವ ಸಂಬಂಧದಲ್ಲಿ "ಸಕಳೇಶನ ಧ್ಯಾನಿಸುವೆ, ಸಿದ್ಧರಾಮಯ್ಯನ ಪೂಜಿಸುವೆ, ಮಡಿವಾಳಯ್ಯನ ಸೇವಿಸುವೆ" ಎಂದು ಪ್ರಭುದೇವರು ನುಡಿದಿದ್ದಾರೆ. ಆದರೆ ಯಾರನ್ನು (ಬಸವಣ್ಣನನ್ನು) ದೂಷಿಸಿದ ಮೂಲಕ ಪ್ರಾಣವಿಯೋಗ ಪ್ರಸಂಗ ಬಂದಿತೋ ಅಂತಹ ಬಸವಣ್ಣ (ವಾಸ್ತವಿಕವಾಗಿ ಯಾರಿಗೆ ಕೇಡಾಗಿದೆಯೋ ಅವರ ಕ್ಷಮೆ ಕೇಳುವುದು ಸ್ವಾಭಾವಿಕ) ನವರನ್ನು ನೆನೆಯದಿರುವುದು ಗ್ರಂಥಕರ್ತನು ಬಸವಣ್ಣನ ಬಗ್ಗೆ ದುರ್ಭಾವನೆಯನ್ನು ಹೊಂದಿದ ಬಗ್ಗೆ ಇನ್ನೊಂದು ನಿದರ್ಶನವನ್ನು ಒದಗಿಸುತ್ತದೆ.

---

* ಈ ಸಂದರ್ಭದಲ್ಲಿ ಶೂನ್ಯಸಂಪಾದನೆ (ಉ. ೮, ವ. ೪೩)ಯಲ್ಲಿ "ಗೊಹೇಶ್ವರ ಲಿಂಗದಲ್ಲಿ ಸಂಗನಬಸವಣ್ಣಂಗೆ ಆಚರಣೆ ತೀಯಂದು ನೋಡಾ ಚನ್ನಬಸವಣ್ಣಾ" ಎಂದುದನ್ನು ಹೋಲಿಸಿ ನೋಡಬಹುದು.

## E8 ಕಟ್ಟುಕಥೆ

ಮುಕ್ತಿಕಂಠಾಭರಣದಲ್ಲಿ ಅನೇಕ ಕಟ್ಟುಕಥೆಗಳಿವೆ. ಅವುಗಳನ್ನು ಹೀಗೆ ವಿವರಿಸಬಹುದು :— (೧) ಪ್ರಭುದೇವರು ಬಸವಣ್ಣನವರನ್ನು ಹೀನಾಯಮಾನವಾಗಿ ಜರೆದುದು (೨) ಗುರುನಿಂದೆಯ ಕಾರಣದಿಂದ ಚನ್ನಬಸವಣ್ಣನು ಪ್ರಾಣವಿಯೋಗ ಮಾಡಿದುದು (೩) ಆ ಪ್ರಸಂಗದಲ್ಲಿ ಬಸವಣ್ಣ ಪ್ರಭುದೇವ ಸಿದ್ಧರಾಮ ಗಂಗಾಂಬಿಕೆ ನೀಲಮ್ಮ ಅಕ್ಕನಾಗಮ್ಮ ಇವರ ಪ್ರಲಾಪ (೪) ಇದೇ ಪ್ರಸಂಗದಲ್ಲಿ ಅಪರಿಚಿತ, ಬಹುಶಃ ಕಾಲ್ಪನಿಕ, ಶರಣೆಯರ ಹೆಸರನ್ನು—ವೇದ-ಕಂಚುಕೀ ಸೌಂದರಿದೇವಿ ಆಗಮಮೋಹಿನಿ ಶಾಂಭವಿ—ಹೇಳಿ ಅವರ ಪ್ರಲಾಪಗಳನ್ನು ಒಂದೆರಡು ವಚನಗಳಲ್ಲಿ ನುಡಿಸಿದುದು (೫) ಬಾಲಸಂಗಯ್ಯನ ವಚನಗಳ ಪ್ರಸ್ತಾಪ. ಇವೆಲ್ಲವೂ ಅಸಂಭಾವ್ಯ ಹಾಗು ಶುದ್ಧ ಕಾಲ್ಪನಿಕ ಸಂಗತಿಗಳೆಂದು ಇತಿಹಾಸದಿಂದ ಮತ್ತು ವಚನಗಳ ಆಧಾರದ ಮೇಲಿಂದ ಹಾಗು ಪರಸ್ಪರ ಸಂದರ್ಭಗಳಿಂದ ವಿದಿತವಾಗುವುದು. ಇವುಗಳ ಬಗೆಗೆ ಒಂದೆರಡು ಮಾತು ಹೇಳುವುದು ಉಚಿತವಾಗಿದೆ.

## E81 ಬಸವನಿಂದೆ

ಜಗದ್ವಂದ್ಯನಾದ ಬಸವಣ್ಣನನ್ನು ತನ್ನ ಗುರುವಾಗಿ ಭಾವಿಸಿ ಅವತಾರಪುರುಷನೆಂದು ಮಂತ್ರಪುರುಷನೆಂದು ಪ್ರಥಮಾಚಾರ್ಯನೆಂದು ಹೇಳಿ ಅವನ ಬಗೆಗೆ ಆದರ ಮನ್ನಣೆ ಹಾಗು ಪೂಜ್ಯಭಾವನೆಯಿಂದ ನಡೆದುಕೊಂಡುದು ಸ್ವತಃ ಪ್ರಭುದೇವರ ವಚನಗಳಿಂದಲೇ ಸ್ಪಷ್ಟವಾಗಿರುವಾಗ ಬಸವಣ್ಣನನ್ನು ಅವರು ಜರೆದರೆಂಬುದನ್ನು ನಂಬುವುದು ಅಸಾಧ್ಯ; ಅದೂ ಸಹ ಬಸವಣ್ಣನು ಪರಸ್ತ್ರೀಯರ ಬಗ್ಗೆ ಛಲಪೂರ್ವಕವಾಗಿ ಆದರ ಬುದ್ಧಿಯಿಂದ ನಡೆದುಕೊಳ್ಳಬೇಕೆಂದು ಹಾಗು ಕಾಮುಕ ದೃಷ್ಟಿಯನ್ನಿಟ್ಟಿರಬಾರದೆಂದು ಹೇಳಿದುದರ ಕಾರಣದಿಂದ. ಈ ವಚನಗಳು ಪ್ರಭುದೇವರ ವಚನ ಸಂಗ್ರಹಗಳಲ್ಲಿ ಕಂಡು ಬರುವುದಿಲ್ಲ. ಇವು ಕೃತಕವಾಗಿವೆ, ಹಾಗು ದುಷ್ಟಬುದ್ಧಿ ಪ್ರೇರಿತವಾಗಿವೆ.

## E82 ಪ್ರಾಣವಿಯೋಗ

ಗುರುನಿಂದೆಯ ಕಾರಣದಿಂದ ಚನ್ನಬಸವಣ್ಣನು ಪ್ರಾಣವಿಯೋಗ ಮಾಡಿದನೆಂದು ಹೇಳಿರುವುದು ಅಷ್ಟೇ ಅಸತ್ಯ ಹಾಗು ಅಸಂಭಾವ್ಯ. ಏಕೆಂದರೆ

ಯಾವುದೇ ಕಾರಣದಿಂದ ಪ್ರಾಣವಿಯೋಗ ಮಾಡುವುದನ್ನು ಅವನು ಖಂಡಿಸಿದ್ದಾನೆ. ಭಕ್ತನ ಲಿಂಗವು ಕಳೆದುಹೋದ ಮೂಲಕ ಪ್ರಾಣವಿಯೋಗ ಮಾಡಬೇಕೆಂಬುದನ್ನು ಖಂಡಿಸಿ ಲಿಂಗವನ್ನು ಕರುಣಿಸಿದ ಗುರುವೇ ಹಿಂತಿರಿಕೊಂಡಾಗ ಪ್ರಾಣವಿಯೋಗ ಸಲ್ಲದಾದುದರಿಂದ ಗುರುನಿಂದೆಯಂಥ ಕ್ಷುದ್ರ ಕಾರಣಗಳಿಗಾಗಿ ಪ್ರಾಣತ್ಯಾಗವನ್ನು ಸಮ್ಮತಿಸಲಾರ. ಇದಲ್ಲದೆ ವೀರಶೈವರ ಆಚಾರವು ಗುರುನಿಂದೆ ಮಾಡಿದವನನ್ನು ದಂಡಿಸಬೇಕು ಎಂದು ಹೇಳುವುದೇ ಹೊರತು ಪ್ರಾಣತ್ಯಾಗವನ್ನಲ್ಲ.

## E83 ಪ್ರಲಾಪ

ಪರಿಚಿತ ಶರಣರು ಚನ್ನಬಸವಣ್ಣನ ಪ್ರಾಣವಿಯೋಗದ ಕಾರಣದಿಂದ ಪ್ರಲಾಪಮಾಡಿದುದು ಮೇಲಿನ ಕಾರಣಗಳಿಂದ ನಿಜಸಂಗತಿಯಲ್ಲ. ಇವೆಲ್ಲ ವಚನಗಳು ಸ್ವಕಲ್ಪಿತವಾಗಿವೆ ಹೊರತು ನಿಜವಾಗಿ ಆ ಆ ಶರಣರವು ಅಲ್ಲ. ವೇದಕಂಚುಕಿ ಸೌಂದರಿದೇವಿ ಆಗಮಮೋಹಿನಿ ಶಾಂಭವಿ (ಇವರೇನು ಶಾಕ್ತ ಪಂಥದವರೊ ಎಂಬ ಸಂಶಯ ಮೂಡುತ್ತದೆ) ಇವೆಲ್ಲ ಹೆಸರುಗಳು ವೀರಶೈವರ ಸಾಂಪ್ರದಾಯಕ್ಕೆ ಐತಿಹಾಸಿಕತೆಗೆ ವಿರುದ್ಧವಾದವುಗಳಾದುದರಿಂದ ಮತ್ತು ಈ ಹೆಸರಿನ ವಚನಕಾರ್ತಿಯರ ಉಲ್ಲೇಖವು ವಚನ ವಾಙ್ಮಯದಲ್ಲಿ ಕಂಡು ಬರುವುದಿಲ್ಲವಾದುದರಿಂದ ಇವೆಲ್ಲವು ಸ್ವಕಲ್ಪಿತ ಪ್ರಸಂಗ ಹಾಗು ವಚನಗಳು ಆಗಿವೆ. ಈ ಬಗ್ಗೆ ಸಂದೇಹವೇನೂ ಇರಲಾರದು. ಇದಲ್ಲದೆ 'ಮರಣವೇ ಮಹಾನವಮಿ' ಎಂದು ಜಗೆದಿರುವ **ವೀರಶೈವರ ವಿಚಾರಧಾರೆಯಲ್ಲಿ ಶರಣರ ಅವಸಾನವು ದುಃಖಪ್ರಸಂಗವಲ್ಲ.**

## E84 ಬಾಲಸಂಗಯ್ಯ

ಬಾಲಸಂಗಯ್ಯನು ವಚನ (೩೦೫–೩೨೫) ಗಳನ್ನು ನುಡಿದುದು ಇವೆಲ್ಲ ಕಟ್ಟುಕತೆಗಳಿಗೆ ಕಳಸವಿಟ್ಟಂತಾಗಿದೆ. ಬಾಲಸಂಗಯ್ಯನು ಗದ್ಯದಲ್ಲಿ ಹೇಳಿದ ಪ್ರಕಾರ ೨–೩ ವರುಷ ವಯಸ್ಸಿನವನಿರಬೇಕು. ಇಂತಹವನು ಗಹನವಾದ ಆಧ್ಯಾತ್ಮಿಕ ಹಾಗು ಅನುಭಾವಾತ್ಮಕ ವಚನಗಳನ್ನು ನುಡಿದುದು ಊಹೆ

ಕಲ್ಪನೆಗಳಿಗೆ ಮೀರಿದುದು ಆಗಿದೆ. ಬಹುಶಃ ಈ ಅನಾಮಧೇಯ ಗ್ರಂಥ ಕರ್ತನಿಗೆ ಜ್ಞಾನದೇವನು ಕೋಣದಿಂದ ವೇದಪಾಠಗಳನ್ನು ನುಡಿಸಿದುದು ಮತ್ತು ಹಾವಿನಹಾಳ ಕಲ್ಲಯ್ಯನು ಶ್ವಾನದಿಂದ ವೇದಪಾಠಗಳನ್ನು ಹೇಳಿಸಿದುದು ಹೊಳೆದು ಅದರಂತಹ ಪವಾಡವನ್ನು ಬಾಲಸಂಗಯ್ಯನಿಂದ ಮಾಡಿಸಬೇಕೆಂದು ವಚನಗಳನ್ನು ನುಡಿಸಿದುದು ಆಗಿದೆ. ಇದು ಮೊದಲಿನವೆರಡು ಪ್ರಸಂಗಗಳಿಗಿಂತಲೂ ಅತ್ಯದ್ಭುತವಾಗಿದೆ. ಹೇಗೆಂದರೆ ಕೋಣವು ಮತ್ತು ಶ್ವಾನವು ನುಡಿದುದು ಲಿಖಿತ ವೇದಪಾಠಗಳನ್ನು. ಆದರೆ ಬಾಲಸಂಗಯ್ಯನು ನುಡಿದುದು ಅಲಿಖಿತ ಹಾಗು ಅಪೂರ್ವವಾದ ವಚನಗಳು. ಹೀಗೆ ಪವಾಡವನ್ನು ಮೆರೆಯಿಸ ಹೊರಟಾಗ ಗ್ರಂಥಕರ್ತನಲ್ಲಿ ಸ್ವಲ್ಪವೂ ಔಚಿತ್ಯವು ಕಂಡು ಬರುವುದಿಲ್ಲ. ಹೇಗಂದರೆ ಬಾಲಸಂಗಯ್ಯನು ವಚನಗಳನ್ನು ನುಡಿದುದು ಗಾಂಭೀರ್ಯದಿಂದಲ್ಲ; ಆದರೆ 'ಬಾಲರಂದದಿ ರೋದಿಸುತ್ತ' ನುಡಿದುದು ಆಗಿದೆ. ಅಲ್ಲದೆ, ಬಾಲಸಂಗಯ್ಯನ ಬಗೆಗೆ ಹೇಳುವಾಗ ವಚನ ೮೦ ದಲ್ಲಿ ಕೋಡಗವೆಂದು ವಚನ ೭೦ ರಲ್ಲಿ ಮೂಳನೆಂದು ಉಪಮಿಸಿದ್ದಾನೆ. ಹೀಗಿರುವಾಗ ಬಾಲಸಂಗಯ್ಯನು ವಚನಗಳನ್ನು ನುಡಿದುದು ಅಸತ್ಯವಷ್ಟೇ ಅಲ್ಲದೆ ಅವನು ನುಡಿದುದು ಎಂದು ಹೇಳುವಲ್ಲಿ ಯಥಾರ್ಥತೆ ಔಚಿತ್ಯಗಳೇನೂ ಇಲ್ಲ.

————

# F ಮುಕ್ತಿಕಂಠಾಭರಣ

## F1 ಸ್ವರೂಪ

ಹನ್ನೆರಡನೆಯ ಶತಮಾನದ ಪ್ರಸಿದ್ಧ ಶರಣರ ನಿಜವಾದ ಕೆಲವು ವಚನಗಳ ಸಂಕಲನದಿಂದ ಮತ್ತು ಅವುಗಳೊಂದಿಗೆ ಸ್ವಕಲ್ಪಿತವಾದ ಅನೇಕ ವಚನಗಳನ್ನು ಬೆರಸಿ ಅನಾಮಧೇಯ ಗ್ರಂಥಕರ್ತನಿಂದ "ಗುರುಪ್ರಶಂಸಾ ಮುಕ್ತಿ-ಕಂಠಾಭರಣ" ಎಂಬ ಹೆಸರಿನಿಂದ ರಚಿತವಾಗಿದೆ. ಅದರ ಹಸ್ತಪ್ರತಿಯು ಶ್ರೀ ವಿಜಯ ಮಹಾಂತೇಶ ಗ್ರಂಥಾಲಯ, ಶಿವಯೋಗಮಂದಿರ ಅಲ್ಲಿತ್ತು. ಅಲ್ಲಿಂದ ಅದು ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ದೊರಕಿದೆ. ನಾನು ನಿಷ್ಕರ್ಷಿಸಿದಂತೆ ಗ್ರಂಥರಚನೆಯ ಕಾಲ ಸುಮಾರು ೧೯೨೦. ಈ ಹಸ್ತಪ್ರತಿಯ ಆಧಾರದ ಮೇಲಿಂದ ಕರ್ನಾಟಕ ವಿಶ್ವವಿದ್ಯಾಲಯವು ೧೯೭೧ ರಲ್ಲಿ ಮೂಲಗ್ರಂಥಕರ್ತನು ಇಟ್ಟ ಹೆಸರಿನ ಪೂರ್ವಭಾಗವಾದ 'ಗುರುಪ್ರಶಂಸಾ' ಎಂಬುದನ್ನು ಬಿಟ್ಟು "ಮುಕ್ತಿಕಂಠಾಭರಣ" ಎಂಬ ಹೆಸರಿನಲ್ಲಿ ಸಂಪಾದಿಸಿ ಪ್ರಕಟಿಸಿದೆ. ಅದರ ಸಂಪಾದಕರು ಡಾ. ಆರ್. ಸಿ. ಹಿರೇಮಠ ಪ್ರಸ್ತಾವನೆಯ ೧೬ ನೆಯ ಪುಟದಲ್ಲಿ "ಪ್ರಸ್ತುತ ಗ್ರಂಥ ಅಪೂರ್ಣವಾಗಿದೆ" ಎಂದಿದ್ದಾರೆ. ಆದರೆ ಕೊನೆಯಲ್ಲಿ ಹೇಳಿರುವ 'ಸಮಾಪ್ತಿ' ಎಂಬುದು ಇದನ್ನು ಅಲ್ಲಗಳೆಯುತ್ತದೆ.

## F2 ಗುಣ-ಯೋಗ್ಯತೆ

ಅನಾಮಧೇಯ ಗ್ರಂಥಕರ್ತನೇ ಇದರ ಗುಣ-ಯೋಗ್ಯತೆಗಳನ್ನು ಅರಿತುಕೊಂಡಿದ್ದಾನೆ; ಇದು ಅಸಾಧು ಹಾಗು ಹೇಯವೆಂಬುದನ್ನು ಮನಗಂಡಿದ್ದಾನೆ. ಅಂತೆಯೆ ಅವನು ತನ್ನ ಹೆಸರನ್ನು ಪ್ರಕಟಿಸಲು ಹೇಸಿಕೊಂಡಿರುವನಲ್ಲದೆ ಈ ಗ್ರಂಥವನ್ನು ಪ್ರಕಟಪಡಿಸಲು ನಿಷೇಧದ ಕಟ್ಟನ್ನು ಹಾಕಿದ್ದಾನೆ; ಇದು ರಹಸ್ಯವಾದ ವಿಷಯವೆಂದಿದ್ದಾನೆ. "ಅಂಗಲಿಂಗದ ಸಮರಸಬೋಧೆಯ ಪಾತಕರಿಗ [ಈ ದುರಾಚಾರವನ್ನು ಒಪ್ಪದ ಸದಾಚಾರಿಗಳಿಗೆ] ರುಹಿದೆಯಾದಡೆ ಸಕಲ ನಾಯಕನರಕಂಗಳಾಗದಿರ್ಪವೆ" ಎಂದಿದ್ದಾನೆ.

ಹೀಗಿರಲು ಈ ಗ್ರಂಥದ ಬಗ್ಗೆ ಸಂಪಾದಕರು ಪ್ರಶಂಸಾಪರವಾಗಿ "ಮುಕ್ತಿಕಂಠಾಭರಣ ವೀರಶೈವ ಧರ್ಮ ತತ್ವಗಳ ನಿಷ್ಕರ್ಷೆ ನಿರ್ಣಯ ದೃಷ್ಟಿಯಿಂದ ಬಹು ಮಹತ್ವವಾದ ಗ್ರಂಥ (ಪುಟ ೧೪)...." ಹೀಗೆ ಹೇಳಿರುವುದು ಇಪ್ಪಲಿಗೆ ವಜ್ರವೆಂದು ಹೇಳಿದಂತಾಗಿದೆ ವಿಕೃತವಾಗಿದೆ. ಇದರಲ್ಲಿ ನಿಷ್ಕರ್ಷೆ ನಿರ್ಣಯವಾದುದು ಏನೆಂದರೆ—ಹಾದರವು ನಿಷಿದ್ಧವಲ್ಲ. ಇದಕ್ಕೆ ಉದಾಹರಣೆ ತರ್ಕಗಳೆಂದರೆ "ಹಾದರವಾಡುವ ನಿಮ್ಮ ಮಿಂಡ ಗಣಂಗಳೊಂದಿಗೆ ಗುಹೇಶ್ವರ-ಲಿಂಗ ಅನುಭವ ಬೀರುವ ಕಾರಣವೇನು" (೫೫೧); ಅಲ್ಲದೆ "ಅಂತಪ್ಪ ಜಂಗಮು ನಿನ್ನ ಸತಿ ಮುಟ್ಟಿದಡೆ ಪಾವನವಲ್ಲದೆ ಪಾಪಿಯೆ" (೧೦೬). ಇದನ್ನು ಅಜ್ಞಾನಿಗಳಿಗೆ ಮೂಢರಿಗೆ ಮುಗ್ಧರಿಗೆ ಬೋಧಿಸಿ ಅವರನ್ನು ದುರ್ಮಾರ್ಗಕ್ಕೆಳಸುವ ಕುಟಿಲ ಹಾಗು ಕುಹಕ ಕಾರಸ್ಥಾನವಾಗಿದೆ. ಇದನ್ನು ವೀರಶೈವ ಧರ್ಮ ತತ್ವಗಳು ಬೋಧಿಸುವುವೇ? ಹಾಗೆ ಹೇಳುವುದು ದಾಷ್ಟ್ರ್ಯ ಹಾಗು ದುಷ್ಟತನವಲ್ಲದೆ ಬೇರೇನು?

## F3 ಅಂಗ

ಈಗ್ಗೆ ಪ್ರಕಟವಾದಂತೆ ಅದರಲ್ಲಿ ನಾಲ್ಕು ಪ್ರಕರಣಗಳಿವೆ. (1) ಗುರು ಪ್ರಶಂಸೆ (2) ಗುರುಪಾದೋದಕ ಪ್ರಶಂಸೆ (3) ಲಿಂಗಧಾರಣ ಪ್ರಶಂಸೆ (4) ಆಚಾರ ಪ್ರಶಂಸೆ. ಅವುಗಳಲ್ಲಿ ಅನುಕ್ರಮವಾಗಿ ನಿಜವಾದುವು ಕೃತಕವಾದುವು ಒಟ್ಟಾಗಿ ಸೇರಿ—೨೮, ೯೫, ೪೮ ಮತ್ತು ೫೫೫ ವಚನಗಳು ಇವೆ. ವಚನ ಸಂಖ್ಯೆಗಳ ಪರಸ್ಪರ ಪ್ರಾಶಸ್ತ್ಯದ ಮೇಲಿಂದ ಗ್ರಂಥಕರ್ತನ ದೃಷ್ಟಿಯಲ್ಲಿ ಗುರುಪ್ರಶಂಸೆಗಿಂತ ಗುರುಪಾದೋದಕ ಪ್ರಶಂಸೆಯು ಹೆಚ್ಚಿನದು, ಇವೆಲ್ಲವುಗಳಿಗಿಂತ ಆಚಾರ ಪ್ರಶಂಸೆಯು ಅತ್ಯಂತ ಮಿಗಿಲಾದದ್ದು ಶ್ರೇಷ್ಠವಾದದ್ದು ಮತ್ತು ಇದೇ ಗ್ರಂಥದ ತಿರುಳು ಹಾಗು ಹುರುಳು ಎಂಬುದಾಗಿ ಕಂಡು ಬರುವದು.

## F31 ಪಾದೋದಕ

ಪಾದೋದಕಗಳು ಮೂರು ಬಗೆಯಾಗಿವೆ.— (1) ಗುರುಪಾದೋದಕ (2) ಲಿಂಗಪಾದೋದಕ (೩) ಜಂಗಮ ಪಾದೋದಕ. ಪಾದೋದಕವು

ಪೂಜೆಯ ಅಂಗವಾಗಿದೆಯೇ ಹೊರತು ಅದಕ್ಕೆ ಪ್ರತ್ಯೇಕವಾದ ಸ್ಥಾನ ಇಲ್ಲವೆ ಪ್ರತಿಷ್ಠೆ ಇಲ್ಲ. ಮೂರು ಬಗೆಯಾದ ಪಾದೋದಕಕ್ಕೆ ಪರಸ್ಪರ ಶ್ರೇಷ್ಠತೆ ಮುಂತಾದ ಕಲ್ಪನೆಗಳಿಲ್ಲ. ಲಿಂಗಪೂಜೆ, ಲಿಂಗಪಾದೋದಕ ನಿಯಮಿತತನದ್ದು ಹಾಗು ನಿತ್ಯವು ಆಗಿದ್ದರೆ ಗುರುಪಾದೋದಕ ಹಾಗು ಜಂಗಮ ಪಾದೋದಕ ಇವು ನೈಮಿತ್ತಿಕವಾಗಿವೆ. ಆದಕಾರಣ ಲಿಂಗ ಪಾದೋದಕಕ್ಕೆಪ್ರಾಶಸ್ತ್ಯದೊರಕಬೇಕೇ ವಿನಹ ಗುರುಪಾದೋದಕಕ್ಕಾಗಲಿ ಜಂಗಮ ಪಾದೋದಕಕ್ಕಾಗಲಿ ಅಲ್ಲ. ವಚನ ೪೬ "ಇಂತಪ್ಪಿಷ್ಟಸ್ಪರ್ಶನೋದಕವೆ ತ್ರಿವಿಧೋದಕವೆಂದರಿದಡದು ಸಮರಸಭಾವ ಕಾಣಾ"ಎಂದು ಹೇಳಿದುದು ಇದನ್ನು ಪುಷ್ಟೀಕರಿಸುತ್ತದೆ. ಯಾವ ವಚನಕಾರರೂ ಗುರುಪಾದೋದಕಕ್ಕೆ ಇಷ್ಟೊಂದು ಪ್ರಾಮುಖ್ಯತೆಯನ್ನು ಕೊಟ್ಟಿಲ್ಲ; ಅದನ್ನು ಸ್ವತಂತ್ರಪ್ರತ್ಯೇಕ ಪ್ರಕರಣವನ್ನಾಗಿ ಮಾಡಿ ಇಷ್ಟೊಂದು ವಚನಗಳಿಂದ ಹೇಳಿಲ್ಲ. ಆದರೂ ಇಷ್ಟೊಂದು ಪ್ರಶಂಸಾತ್ಮಕವಾಗಿ ೯೫ ವಚನಗಳಲ್ಲಿ ಗುರುಪಾದೋದಕ ಪ್ರಶಂಸೆಯನ್ನು ಎಂತು ಮಾಡಲಾಗಿದೆ ಎಂಬುದು ಆಲೋಚನೀಯವಾಗಿದೆ.

## F32 ಪ್ರಮಾಣ

ಇದರಲ್ಲಿ ಯಾವ ಯಾವ ಶರಣರ ವಚನಗಳು ಉಕ್ತವಾಗಿವೆ; ಅವುಗಳಲ್ಲಿ ನಿಜವಾದುವು ಎಷ್ಟು ಕೃತಕವಾದುವು ಎಷ್ಟು ಎಂಬುದನ್ನು ಮೊದಲು ಪರಿಶೀಲಿಸ ಬೇಕಾಗುತ್ತದೆ. ಇದರ ಮೇಲಿಂದಲೆ ಈ ಗ್ರಂಥದಲ್ಲಿ ಹೇಳಿರುವುದು ಎಷ್ಟೆಷ್ಟರ ಮಟ್ಟಿಗೆ ವಿಶ್ವಸನೀಯವಾದುದು ಎಂಬುದು ಗೊತ್ತಾಗುವುದು. ಇದರಲ್ಲಿ, ಪ್ರಭುದೇವರವು ೨೭ ವಚನಗಳಿದ್ದು ಅದರಲ್ಲಿ ಅಧಿಕೃತವಾದವು ಕೇವಲ ಎರಡು; ಮಡಿವಾಳ ಮಾಚಿದೇವರವು ೧೫ ಇದ್ದು ಇವಾವೂ ಅಧಿಕೃತವಾದವುಗಳಲ್ಲ; ಸಿದ್ಧರಾಮನವು ೧೨ ಇದ್ದು ಅದರಲ್ಲಿ ಹನ್ನೊಂದು ಅಧಿಕೃತವಾದವು; ಚನ್ನಬಸವಣ್ಣನವು ಒಂಭತ್ತು ಇದ್ದು ಅದರಲ್ಲಿ ಒಂದು ಅಧಿಕೃತವಿದ್ದರೆ ಅದರಲ್ಲಿ ಪಾದೋದಕ ವಿಚಾರವೇ ಇಲ್ಲ; ಬಸವಣ್ಣನವು ೪ ಇದ್ದರೆ ಅದರಲ್ಲಿ ಮೂರು ಅಧಿಕೃತವಾಗಿದ್ದರೂ ಅವುಗಳಲ್ಲಿ ಪಾದೋದಕದ ಮಾತೇ ಇಲ್ಲ; ಮಿಕ್ಕ ವಚನ ಗಳೆಲ್ಲವೂ ಇತರ ಶರಣರಿಂದ ನುಡಿದವು ಆಗಿವೆ. ಹೀಗಾಗಿ ಇಲ್ಲಿ ಹೇಳಿರುವು ದಕ್ಕೆ ವಿಶ್ವಸನೀಯವಾದುದು ಅಲ್ಪವಾದುದಾಗಿದೆ.

## F33 ಮಹಿಮೆ

ಗುರುವಿನ ಪಾದೋದಕ ಮಹಿಮೆಯನ್ನು ಗುರುವಾದವನು ನುಡಿಯಬೇಕು. ಈ ದೃಷ್ಟಿಯಿಂದ ನೋಡಲಾಗಿ ಇದರಲ್ಲಿ ಉಕ್ತವಾದ ಬಸವಣ್ಣನವರ—ಏಕೆಂದರೆ ಅವರು ಚನ್ನಬಸವಣ್ಣನ ಗುರು—ವಚನಗಳಲ್ಲಿ ಒಂದರಲ್ಲಿಯೂ ಗುರುಪಾದೋದಕದ ವಿಚಾರವು ಇಲ್ಲ. ಇದರಂತೆಯೇ ಚನ್ನಬಸವಣ್ಣನವರ (ಅವರು ಸಿದ್ಧರಾಮನ ಗುರು) ಒಂದೇ ಒಂದಾದ ಆಧರಿತ ವಚನದಲ್ಲಿಗುರು ಇಲ್ಲವೆ ಅವನ ಪಾದೋದಕ ಮಾತ್ರೇ ಇಲ್ಲ. ಹೀಗಾಗಿ ಬಸವಣ್ಣನವರ ವಚನಗಳಲ್ಲಿ ಮತ್ತು ಚನ್ನಬಸವಣ್ಣನ ಅಧಿಕೃತವಾದ ಒಂದು ವಚನದಲ್ಲಿ ಗುರುಪಾದೋದಕದ ಪ್ರಸ್ತಾಪವಿಲ್ಲದ ಕಾರಣ ಇಲ್ಲಿ ಹೇಳಿದುದು ಮಹತ್ವವುಳ್ಳ ಇಲ್ಲವೆ ವಿಶ್ವಸನೀಯವೆನಿಸಲಾರದು. ಸಿದ್ಧರಾಮನ ಎಂಟು ವಚನಗಳಲ್ಲಿ, ಚನ್ನಬಸವಣ್ಣನ (ಕೃತಕ) ಎರಡು ವಚನಗಳಲ್ಲಿ, ಪ್ರಭುದೇವರ ಒಂದು (ಕೃತಕ) ವಚನದಲ್ಲಿ, ಮಡಿವಾಳನ ಒಂದು ಕೃತಕ ವಚನದಲ್ಲಿ ಮತ್ತು ಇತರರ ನಾಲ್ಕು ವಚನಗಳಲ್ಲಿ (ಅಂತೂ ೯೫ ವಚನಗಳ ಪೈಕಿ ೧೬ ವಚನಗಳಲ್ಲಿ) ಪಾದೋದಕ ವಿಚಾರವಿದೆ. ಉಳಿದ ೭೯ ವಚನಗಳು ಏನೇನೋ ಎಂತೆಂತೋ ಪರಿಯಾಗಿ ಸೇರಿಸಿದಂತಿವೆ.

## F4 ದುಷ್ಟವಿಚಾರ

ಬಸವಣ್ಣನವರು 'ಬೆಳೆಯ ಭೂಮಿಯಲೊಂದು ಪ್ರಳಯದ ಕಸಹುಟ್ಟಿ' ಎಂದು ನುಡಿದ ಪರಿಯಲ್ಲಿಯೇ 'ಗುರುಪ್ರಶಂಸೆ'ಯ ಪ್ರಕರಣದಲ್ಲಿಯೇ ದುಷ್ಟಪ್ರವೃತ್ತಿ ದುಷ್ಟವಿಚಾರ ಅಂಕುರಿಸಿವೆ. ಇದು ವಚನ ೪೭–೪೯ ಗಳಲ್ಲಿ ಒಡಮೂಡಿದೆ. ವಚನ ೪೭ರಲ್ಲಿ ಸಿದ್ಧರಾಮನು ಪ್ರಭುದೇವನನ್ನು 'ಅಂಗಲಿಂಗ* [ಲಿಂಗಾಂಗವಲ್ಲ] ಸಮರಸ' ಬೋಧಿಸಲು ಬಿನ್ನೈಸಿಕೊಳ್ಳುತ್ತಾನೆ. ಅದಕ್ಕೆ

---

* 'ಲಿಂಗ'ವೆಂದರೆ ಜನನೇಂದ್ರಿಯ ಎಂಬ ಅರ್ಥವೂ ಉಂಟು. ಆದುದರಿಂದ ಲಿಂಗ ಶಬ್ದಕ್ಕೆ ಇಂತಹ ಅಪಾರ್ಥ ಉಂಟಾಗಬಾರದೆಂದು ಶರಣರೆಲ್ಲರೂ ಲಿಂಗಾಂಗ ಸಮರಸವೆಂದೇ ನುಡಿದಿದ್ದಾರೆ. ಆದರೆ ಮುಕ್ತಿಕಂಠಾಭರಣದ ಕಾಮುಕ ಗ್ರಂಥಕರ್ತನು ಸಂಭೋಗವು ಸಮರಸವೆಂದು ಧ್ವನಿಸುವ ಕುರಿತು ಅಂಗಲಿಂಗ (ಅಂಗದ ಲಿಂಗ = ಅಂಗಲಿಂಗ) ಸಮರಸವೆಂದು ಅನೇಕ ಕಡೆಯಲ್ಲಿ ನುಡಿದಿದ್ದಾನೆ.

ಪ್ರಭುವು ಮುಂದಿನ ವಚನ ೪೮ ರಲ್ಲಿ "ಪೇಳ್ವೆನತಿ ಸೂಕ್ಷ್ಮವಾಗಿ ಬಾಹ್ಯ
ಸಮರಸ [ಸಂಭೋಗಕ್ಕೆ ಬಾಹ್ಯಸಮರಸ ಎಂಬ ಭಾವನೆ ವ್ಯಕ್ತಪಡಿಸಿದಂತೆ
ಇದೆ] ಅಂತಸ್ಸಮರಸವಾಗಿ [ಅಂದರೆ ಸಂಭೋಗವೆ ಸಮರಸವೆಂಬಂತಾಗಿದೆ]"
ಎಂದು ನುಡಿದಿದ್ದಾನೆ. ಮುಂದಿನ ವಚನ ೪೯ ದಲ್ಲಿ "ನಾ ಪೇಳ್ವ ಅಂಗಲಿಂಗದ
ಸಮರಸ ಬೋಧೆಯ— ಗುಹೇಶ್ವರಲಿಂಗ ತಮ್ಮ ರಾಣಿಯರಿಗರುಹಿದ ರಹಸ್ಯ
ಸಂಜೀವನ ಬೋಧೆ (ಇದಕ್ಕೆ ಮುಂದಿನ ವಚನದಲ್ಲಿ ಪಾತಕರಘ, ಅಂದರೆ ಪತಿತರ
ಪಾಪ ಎನ್ನಲಾಗಿದೆ)—ಪಾತಕರಿಗರುಹಿದೆಯಾದಡೆ ಸಕಲ ನಾಯಕ-ನರಕಂಗ
ಳಾಗದಿರ್ಪವೆ" ಎಂದು ನುಡಿಯಲಾಗಿದೆ. ಇದರಿಂದ ಈ ಗ್ರಂಥವು ಹಾದರದಲ್ಲಿ
ಅಭಿರುಚಿಯುಳ್ಳವರಿಗೆ ಮಾತ್ರ (ಈಗಿನ ಕೆಲವು ಸಿನೇಮಾಗಳು ವಯಸ್ಕರಿಗೆ
ಮಾತ್ರಪ್ರವೇಶ ಎಂಬ ಕಟ್ಟುಹಾಕಿದಂತೆ) ಮೀಸಲಾಗಿದೆ ಎಂಬ ವಿಚಾರ ಭಾವನೆ
ಗಳು ವ್ಯಕ್ತವಾಗಿವೆ. ಮುಂದುವರಿದು ೫೦ ನೆಯ ವಚನದಲ್ಲಿ ಸಿದ್ಧರಾಮನು
"ಪಾತಕರಘ —ಅಂದರೆ ಹಿಂದೆ ಹೇಳಿದ ರಹಸ್ಯ ಸಂಜೀವನ ಬೋಧೆ—ಪುಣ್ಯ
ಪುರುಷಂಗರುಹುವಲ್ಲಿ ತಮ್ಮಪ್ಪಣೆಯೆ ಅಯ್ಯಾ" ಎಂದು ಪ್ರಶ್ನಿಸುತ್ತಾನೆ.
ಮುಂದಿನ ವಚನ ೫೧ ರಲ್ಲಿ ಪುಣ್ಯಪುರುಷರಾರು ಎಂಬುದನ್ನು ನುಡಿಯುವಲ್ಲಿ
"ಪುಣ್ಯಪುರುಷರೆಂದಲ್ಲಿ ಜಿತೇಂದ್ರಿಗಳಂತಲ್ಲ [ಅಂದರೆ ಕಳ್ಳ ಹಾದರಿಗರು ಎಂಬ
ಸೂಚ್ಯಾರ್ಥವು ಮುಕ್ತಿಕಂಠಾಭರಣ ಗ್ರಂಥದಲ್ಲಿಯ ಪೂರ್ವಾಪರ ಸಂದರ್ಭ
ಗಳಿಂದ ಹೊರಡುತ್ತದೆ]" ಎಂಬಂತಹ ವ್ಯಾಖ್ಯೆ ಹೇಳಲಾಗಿದೆ. ಇದನ್ನೇ
ಕೊನೆಯದಾದ 'ಆಚಾರ ಪ್ರಶಂಸೆ' ಪ್ರಕರಣದಲ್ಲಿ ಪಲ್ಲವಿಸಿ ಕೊನೆಯಲ್ಲಿ ಹಾದರ
ವಾಡಿದರೆ ಅಡ್ಡಿಯಿಲ್ಲ ಎಂಬ ನಿರ್ಣಯ ನಿಷ್ಪತ್ತಿ ಹೊರಡಿಸಲಾಗಿದೆ.

## F41 ಸಮರಸ

ಅನಾಮಧೇಯ ದುಷ್ಟ ಕುಹಕ ಕಾಮುಕ ಗ್ರಂಥಕರ್ತನು ವೀರಶೈವರ
ಶರಣಸ್ಥಲದ ಪ್ರಾಣಪದಕವಾದ ಸಮರಸಭಕ್ತಿಗೆ ಎಂತಹ ನೀಚ ಹೇಯ ಅಶ್ಲೀಲ
ವಿಚಾರವನ್ನು ಅಂಟಿಸಿದ್ದಾನೆ ಎಂಬುದು ವಿಚಾರಾರ್ಹವಾಗಿದೆ. ಗುರುಪಾದೋ-
ದಕ ಪ್ರಕರಣದಲ್ಲಿಯೇ ವಿಷಯಾಂತರ ಮಾಡಿ ಅಂಗಲಿಂಗದ ಸಮರಸವೆಂಬ
ಸ್ವಕಲ್ಪಿತ ವಿಚಾರವನ್ನು ಮಂಡಿಸಿದ್ದಾನೆ. ಸಮರಸವನ್ನು ದ್ವಿವಿಧವೆಂಬುದಾಗಿ

ಅಲ್ಲವ ಸಲ್ಲವ ರೀತಿಯಲ್ಲಿ ಗಣಿಸಿ ಬಾಹ್ಯಸಮರಸ, ಅಂತಃಸಮರಸ ಎಂದು ಹೇಳಿದ್ದಾನೆ. ಅಂಗಲಿಂಗ ಸಮರಸ (ಸಂಭೋಗ) ಕ್ಕೆ ಬಾಹ್ಯಸಮರಸವೆಂದಿದ್ದಾನೆ. ಇದನ್ನು ಮುಂದಿನ ವಚನ ೬೨ ದಲ್ಲಿ “ ಅಂಗಲಿಂಗಸಮರಸ [ಅಂದರೆ ಹಾದರ] ವೆಂಬುದು ಹಾಳುಮನೆಯ ದೀಪ*ವೆಂದು ಸಾಧಿಸಬಹುದಯ್ಯಾ ಅಲ್ಲಿ ನೋಡುವರಿಲ್ಲ,ನುಡಿಸುವರಿಲ್ಲ” ಈ ಪರಿಯಾಗಿ ಹೇಳಲಾಗಿದೆ. ಇದೇ ವಿಚಾರವು ಸತಿಪತಿಯರ ಅಂಗಭೋಗದ ವಿಷಯವಾಗಿ “ಸಂಗಸೌಖ್ಯವೀವುದು ಗುಹೇಶ್ವರ ಲಿಂಗದಾನಂದ ಸತ್ಯಕೇಳಾ” (IV ೯೧), “ ಅಂಗನಾಸಂಗದಿಂ ಲಿಂಗಸೌಖ್ಯವಾನ್ವನೆಂದಡೆ ” (೯೨), “ಅಂಗಲಿಂಗ ಸಮರಸವ್ಯಾಖ್ಯಾನದಲ್ಲಿ ಭೇದವಿಲ್ಲದೆ ಉಸುರ್ವುದಯ್ಯಾ”(೯೩) ಇವುಗಳಿಂದ ಸ್ಫುಟವಾಗಿದೆ. ಪುರುಷಸತಿಯರ ಸಂಭೋಗವನ್ನು ಸಮರಸವೆಂದು ಉಪಮೆಯಿಂದ ವಿವರಿಸಿದುದಲ್ಲದೆ ಅದಕ್ಕಿಂತಲೂ ಕೀಳಾದ ಜಂತುಗಳ ಉಪಮೆಯನ್ನು ವಚನ IV ೩೯ ರಲ್ಲಿ “ನಾಗರ ಮೈಥುನದಂತಪ್ಪ ಶಿವಯೋಗದ ಶಿವಲಿಂಗ ಸಮರಸಭಾವದಲ್ಲಿ” ಹೇಳಲಾಗಿದೆ.

## F42 ಮರೆ

ಇಂತಹ ಅಶ್ಲೀಲವಾದ ಹೇಯವಾದ ದುಷ್ಟವಾದ ಹೇಳಿಕೆಗಳನ್ನು ಮರೆಮಾಚಲು ಗ್ರಂಥಕರ್ತನು ಸಮರಸದ ಬಗ್ಗೆ ಕೆಲವು ಒಳ್ಳೆಯ ವಿಚಾರಗಳನ್ನು ಹೇಳಿದ್ದಾನೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಹೇಳಬಹುದು :

( i ) “ಇಷ್ಟ ಸ್ಪರ್ಶನೋದಕವೆ ತ್ರಿವಿಧೋದಕವೆಂಬರಿದಡು ಸಮರಸಭಾವ ಕಾಣಾ” (II ೪೬ ಪ್ರಭು)

( ii ) “ ತ್ರಿಕರಣಶುದ್ಧವಾಗಿ ಭೂತದಯೆ .... ಜಿತೇಂದ್ರಿಯತ್ವ .... ಅಷ್ಟಾವರಣದಾಚಾರವಿರಲು....ಆತನೆ ಕಲಿದೇವರ ಸಮರಸ ಜ್ಞಾನಕ್ಕೆ ಅರ್ಹನಯ್ಯಾ” (II ೫೪ ಮಡಿವಾಳ)

* ಇಲ್ಲಿ ಕಳ್ಳತನದಲ್ಲಿ ಹಾದರ ಮಾಡಿದರೆ ನೋಡುವವರಿಲ್ಲ ಎಂಬ ವಿಚಾರವಿದ್ದರೆ ವಚನ ೫೩೩ ದಲ್ಲಿ ಇದೇ ಉಪಮೆ “ಹಾದರ ಮಾಡಿದವನ ಪೂಜೆ ಹಾಳು ಮನೆಯ ದೀಪ”ವು ಹಾದರವಾಡಿದರೆ ಪೂಜೆಯು ವ್ಯರ್ಥವಾಗುವುದು ಎಂದು ಸೂಚಿಸುತ್ತದೆ.

( iii ) ವಚನ (II ೭೬ ಮಡಿವಾಳ) ದಲ್ಲಿ ಷಡ್ವಿಧ ಲಿಂಗಗಳಿಗೆ ಷಡ್ವಿಧ ಪದಾರ್ಥಗಳನ್ನು ಅರ್ಪಿಸುವುದು ಸಮರಸವೆಂದು ಹೇಳಲಾಗಿದೆ.

( iv ) ವಚನ (IV ೨೯ ಪ್ರಭು) ದಲ್ಲಿ "ನೋಟವೆ ಕೂಟ, ಕೂಟವೆ ಪ್ರಾಣ, ಪ್ರಾಣವೆ ಏಕಸಮರಸ, ಸಮರಸವೆ ಲಿಂಗಾಂಗ ಪರಿಪೂರ್ಣ" ಎಂದು ನುಡಿಯಲಾಗಿದೆ.

## F5 ಅಂತರಂಗ

ಇನ್ನು ಮುಕ್ತಿಕಂಠಾಭರಣ ಗ್ರಂಥದ ಅಂತರಂಗವನ್ನು ಪರೀಕ್ಷಿಸೋಣ. ಮೊದಲನೆಯದಾದ 'ಗುರುಪ್ರಶಂಸೆ' ಪ್ರಕರಣದಲ್ಲಿ ಲಿಂಗದ ಉಲ್ಲೇಖ ಬರುತ್ತದೆ. ಏಕೆಂದರೆ ಗುರುವಿನ ಕಾರ್ಯ • ಭಕ್ತನಿಗೆ ಲಿಂಗದೀಕ್ಷೆ ಮಾಡುವುದು. ಈ ಸಂಬಂಧವಲ್ಲಿ ಲಿಂಗದ ಪ್ರಸ್ತಾಪ ಬಂದಿದೆ. ಆದರೆ ಇಲ್ಲಿ ಲಿಂಗ ಕುರಿತಾಗಿ ಹೇಳಿರುವುದು— ಅಂತೆಯೆ ವಚನ ಪು. ೨೮ ವ. ೭೭ ದಲ್ಲಿ ಹೇಳಿರುವುದು— ವೀರಶೈವ ವಿಚಾರಧಾರೆಯಲ್ಲಿಲ್ಲ. ಅದು ವೀರಶೈವ ಲಿಂಗವಲ್ಲ. ಲಿಂಗವಂತರು (ವೀರಶೈವ) ಲಿಂಗವೆಂದಾಗ ಇಷ್ಟಲಿಂಗವೆಂದೇ ಗ್ರಹಿತವಾಗುತ್ತದೆ. ಆದರೆ ಇಲ್ಲಿ ಪ್ರಸ್ತಾಪಿಸಿದುದು ಸ್ಥಾವರಲಿಂಗ ಮತ್ತು ಅದರ ಷಡ್‌ಭಾಗಗಳು, ಅದರಲ್ಲಿಯ ಶಿವ-ಗೋಳಕ, ಶಕ್ತಿ-ಪೀಠ, ಊರ್ಧ್ವಭಾಗ-ಅಧೋಭಾಗ, ಲಿಂಗ-ಕಲಶ. ಇಲ್ಲಿಯೇ ಶಿವ-ಶಕ್ತಿ,ನಾಳ-ಗೋಳಕ ಇವುಗಳ ಸಂಯೋಗ (ವ. I ೧೨) ದಲ್ಲಿ ಪುರುಷ-ಸ್ತ್ರೀ ಅವರ ಸಂಯೋಗ ವಿಚಾರವು ಧ್ವನಿತವಾಗಿದೆ. ಲಿಂಗವಂತರ ಇಷ್ಟಲಿಂಗದೊಳಗೆ ಸ್ಥಾವರಲಿಂಗದಂತೆ ಷಡ್‌ಭಾಗಗಳುಳ್ಳ ವಸ್ತುವಿರುವುದಾದರೂ ಅದನ್ನು ಒಂದು ಕಪ್ಪು ಆವರಣದಿಂದ ಮುಚ್ಚಿ ಮರೆಸಿಬಿಡಲಾಗುತ್ತದೆ; ಏಕೆಂದರೆ ಪರವಸ್ತು (ಲಿಂಗ)ವನ್ನು ಖಂಡ ಖಂಡವಾಗಿ ಗ್ರಹಿಸುವುದಿಲ್ಲ, ಆದರೆ ಅಖಂಡವಾಗಿ. ಆದುದರಿಂದ ಪರವಸ್ತುವಿಗೆ ಸತ್‌ಚಿತ್ ಆನಂದ ನಿತ್ಯ ಪರಿಪೂರ್ಣ ಅಖಂಡ ಎಂಬ ಆರು ಲಕ್ಷಣಗಳನ್ನು ಆರೋಪಿಸಲಾಗುತ್ತದೆ. ಮತ್ತು ಆದರಲ್ಲಿ ಹುದುಗಿರುವ ವಸ್ತುವಿನ ಬಗ್ಗೆ ಏನೂ ಹೇಳುವುದಿಲ್ಲ.ಆದುದರಿಂದ ಇಷ್ಟಲಿಂಗವು ಶೂನ್ಯ, ಆಕಾರ ಶೂನ್ಯ, ರೂಪು ಶೂನ್ಯ, ವರ್ಣಶೂನ್ಯವಾಗಿದೆ.

## F51 ಆಚಾರ

ಎರಡನೆಯ ಪ್ರಕರಣದಲ್ಲಿಯ 'ಗುರುಪಾದೋದಕ' ಕುರಿತಾದ ವಿಚಾರವನ್ನು ಈ ಮೊದಲೇ ಹೇಳಲಾಗಿದೆ. ಮೂರನೆಯ ಪ್ರಕರಣದಲ್ಲಿಯ ಲಿಂಗಧಾರಣೆ ಪ್ರಶಂಸೆ ವಿಷಯದಲ್ಲಿ ಹೇಳಿಕೊಳ್ಳುವಂಥದೇನೂ ಇಲ್ಲ. ಆದುದರಿಂದ ನಾಲ್ಕನೆಯ ಹಾಗು ಕೊನೆಯದಾದ 'ಆಚಾರ ಪ್ರಶಂಸೆ' ಪ್ರಕರಣವನ್ನು ಕುರಿತು ದೀರ್ಘವಾಗಿ ಏಕೆಂದರೆ ಗಾತ್ರದಲ್ಲಿ ಇದು ಅತ್ಯಂತ ದೊಡ್ಡದಾಗಿದ್ದು ಇದು ಟೀಕೆಗೆ ನಿಂದೆಗೆ ಅವಹೇಳನಕ್ಕೆ ಗುರಿಯಾಗುವಂತಹವಾಗಿದೆ. ವೀರಶೈವ ಧರ್ಮದಲ್ಲಿಯ ಅಷ್ಟಾವರಣಗಳ ಪೈಕಿ ಗುರು ಲಿಂಗ ಪಾದೋದಕ (ಆಚಾರ ಪ್ರಶಂಸೆಯಲ್ಲಿ ಪ್ರಸಾದ ಕುರಿತಾದ ಕೆಲವು ವಚನಗಳು ಇವೆ) ಮುಂತಾದವುಗಳ ನಂತರ ಗ್ರಂಥಕರ್ತನು ಆಚಾರದ ವಿಷಯದಲ್ಲಿ ಕಾಲಿರಿಸಿದ್ದಾನೆ.

## F52 ವಿದಿತಾಚಾರ

ವೀರಶೈವರಿಗೆ ಗಮನೀಯವಾದುವು ಸದಾಚಾರ ಶಿವಾಚಾರ (ಲಿಂಗಾಚಾರ‡) ಸಮಯಾಚಾರ ಗಣಾಚಾರ ಭೃತ್ಯಾಚಾರ ಈ ಪಂಚಕಗಳು ಪ್ರಸಿದ್ಧವಾಗಿವೆ. ಅಲ್ಲದೆ ಆಚಾರಗಳನ್ನು ಸಪ್ತವಿಧ (ಕ್ರಿಯಾಚಾರ, ಜ್ಞಾನಾಚಾರ, ಭಾವಾಚಾರ, ಸತ್ಯಾಚಾರ, ನಿತ್ಯಾಚಾರ, ಧರ್ಮಾಚಾರ, ಸರ್ವಸಂಪತ್ತಿನಾಚಾರ) ವಾಗಿಯೂ ಹೇಳುತ್ತಾರೆ; ಮತ್ತು ಕ್ರಿಯೆಗೆ ಸಂಬಂಧಿಸಿದಂತೆ ೫೦ ತೆರದ* ಆಚಾರಗಳನ್ನು ಚನ್ನಬಸವಣ್ಣನವರು ವಚನ ೧೧೨ ದಲ್ಲಿ ಹೇಳಿರುತ್ತಾರೆ. ಇವಾವುಗಳನ್ನು ಈ ಪ್ರಕರಣದಲ್ಲಿ ಕ್ರಮವಾಗಿ ಇಲ್ಲವೆ ವ್ಯವಸ್ಥಿತವಾಗಿ ಹೇಳಿಲ್ಲ. ಪ್ರತಿಯಾಗಿ ಅನಾಚಾರ ದುರಾಚಾರಗಳ ಪ್ರಸ್ತಾಪ ಬಂದಿದೆ, ಮತ್ತು ಅವು ಪ್ರಶಂಸನೀಯವಾದುವು (ಈ ಪ್ರಕರಣದ ಹೆಸರಿನ ಮೇಲಿಂದ) ಎನ್ನುವಂತೆ ಇದೆ; ಮತ್ತು ಹಾದರವನ್ನು ನಿಷಿದ್ಧವಲ್ಲವೆಂದು ಹೇಳುವ ಮೂಲಕ ಅದನ್ನು ಎತ್ತಿಹಿಡಿಯುವಂತೆ ಕಾಣುತ್ತದೆ.

---

‡ ಲಿಂಗಾಚಾರವನ್ನು ಬೋಧಿಸ ಹೊರಟಂತೆ ನಟಿಸಿ ಗ್ರಂಥಕರ್ತನು ಅಂಗ-ಲಿಂಗದ ಅಂದರೆ ಜನನೇಂದ್ರಿಯದ ಮಾತೆತ್ತಿದ್ದಾನೆ; ಅಂತೆಯೆ ಸಂಭೋಗವೆ ಸಮರಸವೆಂದು ಧ್ವನಿಸಿದ್ದಾನೆ; ಹಾಗು ಹಾದರವು ನಿಷಿದ್ಧವಲ್ಲವೆಂದು ಘೋಷಿಸಿದ್ದಾನೆ.

* ಹಳಕಟ್ಟಿ ಫ. ಗು. ಶಿವಾನುಭವ ಶಬ್ದಕೋಶ (೧೯೭೨).

## F53 ಕಿಚಡಿ

ಇದು ಒಂದು ವಿಷಯವನ್ನು ಪ್ರಸ್ತಾಪಿಸುವ ವಿವರಿಸುವ ಪ್ರತಿಪಾದಿಸುವ ಪ್ರಕರಣವಾಗಿಲ್ಲ. ಇದು ಬಗೆ ಬಗೆಯ ವಚನಗಳನ್ನೊಳಗೊಂಡ ಕಿಚಡಿಯಂತೆ–ಸಂಬಂಧವಿಲ್ಲದ,ಉಚಿತವಲ್ಲದ,ಅಸಂಬಂದ್ಧವೆನಿಸುವ ತೆರದಲ್ಲಿ ಮಿಶ್ರಿತವಾದುದು-ಇದೆ. ಇದರಲ್ಲಿಯ ಅನೇಕ ವಚನಗಳಲ್ಲಿ ಅಷ್ಟಾಂಗಯೋಗ, ಶಾಂಭವ ಯೋಗ ವಿಚಾರಗಳನ್ನು ಹೇಳಲಾಗಿದೆ. ಎಷ್ಟೋ ವಚನಗಳು ಆಹಾರದ ಕುರಿತಾಗಿವೆ. ಒಂದಂತೂ ಔಷಧ—ವಿಷಯಲಂಪಟರು ಬಳಸುವ ಔಷಧ ( ಈ ದಿಶೆಯಲ್ಲಿ ವಚನ ೧೬೧ ರಲ್ಲಿಯ ವಾಕ್ಯ " ರತಿ ಕಾರಣನಾಗಿ ಮೂಲಿಕೆ ತೆಗೆದುಕೊಳ್ಳುವವನೋರ್ವ " ನೋಡಬಹುದು) — ಕುರಿತಾಗಿದೆ. ಇವೆಲ್ಲ ವಿಚಾರಗಳು ಪ್ರಶಂಸನೀಯ ಆಚಾರಗಳೆಂತಾಗುವವ್ರೋ ? ಇವುಗಳನ್ನು ಗ್ರಂಥಕರ್ತನು ತಾನು ಹೇಳಿರುವ ಅಶ್ಲೀಲ ಅನಾಚಾರ ದುರಾಚಾರದ ಮೇಲೆ ತೆರೆಯೆಳೆಯುವ ಮುಸುಕು ಹಾಕುವ ಪ್ರಯತ್ನವಾಗಿ ಮಾಡಿದ್ದಾನೆ. ಈ ಪ್ರಕರಣದಲ್ಲಿ ಆದಿ ಮಧ್ಯ ಅಂತ್ಯಗಳಲ್ಲಿ ಸೂತ್ರವಾಗಿರುವ ಅಶ್ಲೀಲ ಸ್ತ್ರೀಸಂಗ ಪರಸ್ತ್ರೀಸಂಗ ಹಾದರ ಇವುಗಳ ಕಾಮುಕತೆಯು ವ್ಯಕ್ತವಾಗಿರುವದು. ಆಚಾರವೆಂದು ಹೇಳುವ ಈ ವಚನಗಳು ೩೬೯–೭೧, ೩೮೫, ೩೮೮, ೩೯೨, ೪೫೧, ೪೮೬, ೫೧೪, ೫೩೬ ಆಚಾರ ಸೂಚ್ಯವಾಗಿದ್ದರೂ ಅವು ಮಹತ್ವದವು ಆಗಿಲ್ಲ, ಗೌಣವಾಗಿವೆ.

## F54 ಆಚಾರ್ಯ

ಬಸವಣ್ಣನವರು ವೀರಶೈವದ ಪ್ರಥಮಾಚಾರಿ ಪೂರ್ವಾಚಾರಿ ಸಮಯಾಚಾರಿಯಾದುದರಿಂದ ಮುಕ್ತಿಕಂಠಾಭರಣದಲ್ಲಿ ಅವರ ೧೦೦ ವಚನಗಳ ಪೈಕಿ ೯೧ ವಚನಗಳು ಈ ಪ್ರಕರಣದಲ್ಲಿ ಬಂದಿವೆ. ಇದರ ಆರಂಭದಲ್ಲಿ ಗ್ರಂಥಕರ್ತನು ವಚನ ೩ ರಿಂದ ೧೫ ರ ವರೆಗೆ ಬಸವಣ್ಣನವರ ವಚನಗಳನ್ನು ಉದ್ಧರಿಸಿದ್ದಾನೆ. ವಚನ ೩ ರಲ್ಲಿ ಆಚಾರಲಿಂಗವಿಡಿದು ಮುಂದಿನ ಸ್ಥಲಗಳನ್ನು ಸಾಧಿಸುವುದನ್ನು ಹೇಳಲಾಗಿದೆ; ೪ನೆಯದರಲ್ಲಿ ಸದಾಚಾರದ ಪ್ರತಿಪಾದನೆ ಇದೆ; ಇದರಲ್ಲಿ ಲಿಂಗವನ್ನು ಷಟ್‌ಸ್ಥಲ ಮಾರ್ಗದಿಂದಲ್ಲದೆ ಯೋಗ ಮಾರ್ಗದಿಂದ ಅರಿಯಬಾರದು ಎಂದಿದೆ; ೬ ರಲ್ಲಿ ಲಿಂಗ ನೋಡುತ್ತ ಅಂಗವಿಕಾರದ ಸಂಗವಳಿಯುವು

ದನ್ನು ನಿರೂಪಿಸಲಾಗಿದೆ; ೭ರಲ್ಲಿ ಪರವಧುವನ್ನು ಮಹಾದೇವಿಯಂತೆ ಕಾಣಬೇಕೆಂದು ವಿಧಿಸಲಾಗಿದೆ; ೮ರಲ್ಲಿ ಪರಸ್ತ್ರೀ ಪರಧನವೆಂಬ ಜೂಜಿಗಂಜುವೆ ಎನ್ನಲಾಗಿದೆ; ೯ರಲ್ಲಿ ಆಶೆ ಆಮಿಷ ತಾಮಸ ಹುಸಿ ವಿಷಯ ಕುಟಿಲ ಕ್ಷುದ್ರ ಮಿಥ್ಯ ಇವುಗಳನ್ನು ಅಳಿಯಬೇಕು ಎಂದು ಸಾರಲಾಗಿದೆ; ೧೦ರಲ್ಲಿ ಮಾಡಿದೆನೆಂಬ ಅಹಂಕಾರ ಇರಬಾರದು ಎನ್ನಲಾಗಿದೆ; ೧೧ರಲ್ಲಿ ಅಹಂಕಾರರಹಿತನಾದಲ್ಲಿ ಶರಣ ಸನ್ನಿಹಿತ ಎನ್ನಲಾಗಿದೆ; ೧೨-೧೪ರಲ್ಲಿ ಕೂಡಲಸಂಗನ ಶರಣರೊಡನೆ ಸರಸವಾಡುವುದು ಸಲ್ಲದು ಎಂದಿದೆ; ೧೫ರಲ್ಲಿ ಅಚ್ಚಲಿಂಗೈಕ್ಯರಿಗೆ ತೊತ್ತಾಗಿರುವುದು ಲೇಸು ಎನ್ನಲಾಗಿದೆ.

## F6 ಉದ್ದೇಶ

ಆರಂಭದಲ್ಲಿ ತೋರಿಕೆಗಾಗಿ ಉಚಿತವೆನಿಸುವ ಮಹತ್ವದವೆನಿಸುವ ಆಚಾರವನ್ನು ನಿರೂಪಿಸುವ ಬಸವಣ್ಣನವರ ಈ ವಚನಗಳನ್ನು ಹೇಳಿ ಮುಂದೆ ಗ್ರಂಥಕರ್ತನು ತನ್ನ ಅಂತರಂಗದ ಮರ್ಮವನ್ನು ಬಿಚ್ಚುತ್ತಾನೆ. ಅವನ ಉದ್ದೇಶವು ಪರಸ್ತ್ರೀಸಂಗ, ಸ್ತ್ರೀ ಭೋಗ. ಇದಕ್ಕೆ ಪ್ರತಿಹೇಳುವವನಾದ—ಪರಸ್ತ್ರೀಯರನ್ನು ಮಾನ-ಮರ್ಯಾದೆಯಿಂದ ನೋಡಬೇಕು, ಅವರಲ್ಲಿ ಕಾಮುಕ ದೃಷ್ಟಿಯನ್ನಿಟ್ಟುಕೊಂಡಿರಬಾರದು, ಅವರನ್ನು ಮಹಾದೇವಿಯೆಂಬಂತೆ ಪೂಜ್ಯ ಬುದ್ಧಿಯಿಂದ ನೋಡಬೇಕು ಮುಂತಾಗಿ—ಮತ್ತು ಸ್ತ್ರೀಯರಬಗ್ಗೆ ಗೌರವಾನ್ವಿತ ವಿಚಾರಗಳನ್ನು ಆಚರಣೆಯನ್ನು ಬೋಧಿಸುವ ಬಸವಣ್ಣನವರನ್ನು ಖಂಡಿಸುವುದಾಗಿದೆ. ಆದರೆ ನೇರವಾಗಿ ಸ್ಪಷ್ಟವಾಗಿ ಪ್ರತಿಪಾದಿಸುವ ಧೈರ್ಯವಿಲ್ಲ, ಎದೆಗಾರಿಕೆಯಿಲ್ಲ. ಆದುದರಿಂದ ಇದನ್ನು ಕದ್ದು ಮುಚ್ಚಿ ಹಾಗು ಗೋಮುಖವ್ಯಾಘ್ರನಂತೆ ಇಲ್ಲವೆ ಬಸವಣ್ಣನವರು ಹೇಳಿರುವ ಉಪಮೆ "ಬೆಳ್ಳಿತ್ತಿನ ಮರೆಯಲ್ಲಿರ್ದು ಹುಲ್ಲಿಗಂಬುವ ತೊಡುವಂತೆ" ಮಾಡಿದ್ದಾನೆ. ಆದುದರಿಂದಲೇ ತನ್ನ ದುಷ್ಟವಿಚಾರಗಳೊಂದಿಗೆ ಉಚಿತವೆನಿಸುವಹಲವುವಿಚಾರಗಳನ್ನು ಈಪ್ರಕರಣದಲ್ಲಿಸೇರಿಸಿದ್ದಾನೆ.

## F61 ಅಧೋಗತಿ

ಇಲ್ಲಿಂದ ಮುಂದೆ ಶರಣ ಶರಣರ ನಡುವೆ ಚರ್ಚೆ ನಡೆದಂತೆ ತೋರಿಸಿ ವಿಷಯಾಂತರಮಾಡಿ ೨೦ ನೆಯ ವಚನದಲ್ಲಿ ಸೋಟ, ೨೯ ರಲ್ಲಿ ಕೂಟ,

೩೦ರಲ್ಲಿ ನೇತ್ರ, ೩೧ರಲ್ಲಿ ನೇತ್ರವೇ ಲಿಂಗವೆಂದು ಹೇಳಿ ಅದನ್ನು ದುಸ್ಟ ವಿಚಾರಕ್ಕೆ ಸಿಲುಕಿಸಿ ವಚನ ೩೨, ೩೩ ಗಳಲ್ಲಿ ಸಂಭೋಗ ಚೇಷ್ಟೆ ಕ್ರಿಯೆಗಳಿಗೆ ನೇತ್ರ ಹಾಗು ಸಮರಸ ವಿಚಾರವನ್ನು ತಳುಕುಹಾಕುತ್ತಾನೆ. ೩೪ರಲ್ಲಿ ಭ್ರೂಮಧ್ಯ ದೃಷ್ಟಿ ೩೫ರಲ್ಲಿ ಇಷ್ಟಲಿಂಗದಲ್ಲಿ ಲೀನವಾದ ನೋಟ ಇವುಗಳನ್ನು ಹೇಳಲಾಗಿದೆ. ನಂತರದಲ್ಲಿ ಸುಸಂಬದ್ಧವಲ್ಲದ ವಿಚಾರಗಳನ್ನೆತ್ತಿ ನುಡಿದು ವಚನ ೫೦ರಲ್ಲಿ ಸಾಧನೆ ಸಿದ್ಧಿಗಳ ಮಾತೆತ್ತಿ "ಬರಿಯ ಜಪದಿಂದಾಗದು ಸಿದ್ಧಿ, ಬರಿಯ ಅರುವಿನಿಂದಾಗದು ಸಿದ್ಧಿ, ಬರಿಯ ಭ್ರಾಂತಿಯಿಂದಾಗದು ಮನದಿಷ್ಟ ಪೂರ್ಣ" ಹೀಗೆ ಹೇಳಿ ಕ್ರಿಯೆ ಅವಶ್ಯವೆಂದು ಸೂಚಿಸಿ ಮುಂದಿನ ವಚನದಲ್ಲಿ ಇಷ್ಟಲಿಂಗಸಿದ್ಧಿ, ಪ್ರಾಣಲಿಂಗಸಿದ್ಧಿ, ಭಾವಲಿಂಗಸಿದ್ಧಿ ಇವುಗಳ ಕುರಿತಾಗಿ ಹೀಗೆ ನುಡಿಯಲಾಗಿದೆ.—"ಜಾಗ್ರತಿಯಲ್ಲಿ ಪರಸ್ತ್ರೀಸಂಗ ಪಾವಕಶೀತಲದಂತಾದಡೆ ಇಷ್ಟಲಿಂಗಸಿದ್ಧಿ; ಸ್ವಪ್ನದಲ್ಲಿ ಪರಸ್ತ್ರೀಕಾಂಕ್ಷೆ ಪರಶಿವಪದದಿಷ್ಟವಾದ ತೆರನಾದಡೆ ಪ್ರಾಣಲಿಂಗಸಿದ್ಧಿ; ಸುಷುಪ್ತಿಯಲ್ಲಿ ನಿಜಸ್ತ್ರೀಸಂಗ ರತಿಕಾಂಕ್ಷೆ ತೋರ್ದಡೆ ಭಾವಲಿಂಗಸಿದ್ಧಿ ಕಾಣಾ, ಕಲಿದೇವರ ಶರಣಸಿದ್ಧರಾಮಯ್ಯಾ".* ಈ ವಚನದಲ್ಲಿ ಹೇಳಿರುವು (ಶಾಂಭವ ಕೃತ್ಯ) ದನ್ನು ವ್ಯಾಖ್ಯೆ ಟೀಕೆ ಎಂಬಂತೆ "ಅಯ್ಯಾ ನೀ ಪೇಳ್ವ ಶಾಂಭವ ಕೃತ್ಯದಲ್ಲಿ ಎಮ್ಮದೊಂದು ಶಂಕೆ". ಅದೇನೆಂವಡೆ "ಅಂಗಲಿಂಗ ಸಮರಸಕೂಟ ಸಮರಸನೋಟವುಳ್ಳ ಶರಣ, ತಮ್ಮಂಗನೆಯರ ಕೂಟ ಕೂಟವೊ ಕೂಟ ಬೇಟವೊ" ಪ್ರಶ್ನಿಸಲಾಗಿದೆ. ಈ ಬಗೆಯಲ್ಲಿ ಆತ್ಮ-ಪರಮಾತ್ಮರ ಕೂಟ, ವ್ಯಕ್ತಿ-ಸಮಷ್ಠಿ ಏಕತೆ (ಸಮರಸ), ಪುರುಷ-ಸ್ತ್ರೀಯರ ಕೂಟ ಇವೆರಡರಲ್ಲಿ ಹೋಲಿಕೆ ಮತ್ತು ಸಂಬಂಧ ಸೂಚಿಸಲಾಗಿದೆ. ಈ ಪರಿಯಾಗಿ ಆಧ್ಯಾತ್ಮದ ಉಚ್ಚ ನಿಲುವೆಯನ್ನು ಸಂಭೋಗದಂತಹ ಅಧೋಗತಿಗೆ ಎಳೆಯಲಾಗಿದೆ.

---

* ಇದರಲ್ಲಿ ಖಂಡಿತವಾಗಿ ವಿಷಯವಾಸನೆಯ ವಿಚಾರವಿದೆ ಎಂಬುದು ಮುಂದಿನ ವಚನದಲ್ಲಿಯ ಹೇಳಿಕೆ "ಒಂದು ವಿಷಯದ ಗಾಳಿಯಲ್ಲಿ ಸಕಲ ಪಾಪ ರೇಣುಗಳು ಮನೆಮಾಡಿಕೊಂಡಿಪ್ಪವು" ಯಿಂದ ಸ್ಪಷ್ಟವಾಗುತ್ತದೆ. ಅಲ್ಲದೆ ಮುಂದಿನ ವಚನದಲ್ಲಿ 'ತಮ್ಮಂಗನೆಯರ ಕೂಟ'ದ ಪ್ರಶ್ನೆ ಎತ್ತಲಾಗಿದೆ. ಕಾರಣವೆಂದರೆ, ಹಿಂದಿನ ವಚನದಲ್ಲಿ ಪರಸ್ತ್ರೀ ಸಂಗದ ಕುರಿತು ನುಡಿಯಲಾಗಿದೆ.

## F62 ಹೇಯವಾರ್ತೆ

೫೨ನೆಯ ವಚನದಲ್ಲಿ ಪ್ರಾರಂಭವಾದ ಪುರುಷ-ಸತಿಯರ ಸಂಗ (ಅಂಗನೆಯರ ಭೋಗ) ದ ರಚ್ಚೆಯನ್ನು ಮನ ಬಂದಂತೆ ಬೆಳಸಿ ಆಡಬಾರದ್ದನ್ನು ಹೇಳಬಾರದ್ದನ್ನು ಕೇಳಬಾರದ್ದನ್ನು—"ಕೇಳುಕೇಳೆಂದಡೆ ಕೇಳುವಾತ ಮೂಳನೋ ಹೇಳುವಾತ ಮೂಳನೋ" (೫೮) "ಕೇಳದೆ ಹಿರಿಯರಾಗಿರ್ಪುದು ಚಂದ ಕೇಳಿ ಕೋಡಗವಾಮುದು ಭೂಷಣವೆ" (ವಚನ ೮೧)— ೯೫ ನೆಯ ವಚನ ಪರ್ಯಂತ ನುಡಿಸಿದುದು ಆಗಿದೆ. ಯಾವುದನ್ನು ವೈಯಕ್ತಿಕ ವಿಷಯವೆಂದು ಗೃಹ ವಿಷಯುವೆಂದು ಮನೆವಾರ್ತೆಯೆಂದು ರಹಸ್ಯವೆಂದು ಬಗೆಯಲಾಗುವುದೋ ಅಂತಹದನ್ನು ಇಲ್ಲಿ ಏನಕೇನ ಪ್ರಕಾರೇಣ ಹಾಳು ಹರಟೆಯಂತೆ ಹೇಳಲಾಗಿದೆ. ಇದರಿಂದ ವೀರಶೈವ ಆಚಾರ-ವಿಚಾರಗಳ ವಿಷಯವೇನೂ ಮಥಿತವಾಗಿಲ್ಲ. ಪ್ರತಿಯಾಗಿ ಲಿಂಗಾಂಗಸಮರಸಭಾವವನ್ನು ಅಧೋಗತಿಗೆಳೆದು ಅಂಗಸೌಖ್ಯಕ್ಕೆ ಅನ್ವಯಿಸಲಾಗಿದೆ. ಇದರಿಂದ ರತ್ನಾಕರವರ್ಣಿಯ "ಬಚ್ಚಲ ನೀರ್ ಕದಡಿದೊಡೇಂ ನಿಚ್ಚಳದಿಂ ಆತ್ಮಭೋಗ ಪರಹಿತಕಿಲ್ಲಂ" ಸುಭಾಷಿತವು ನೆನಪಾಗುತ್ತದೆ.

## F63 ದುರುಳ ವೇದಾಂತ

ಪರಸ್ತ್ರೀಸಂಗದ ಸಮರ್ಥನೆಗಾಗಿ ದುರುಳ ವೇದಾಂತವನ್ನು ಬೋಧಿಸಿದ ಉದಾಹರಣೆಗಳು ಮುಕ್ತಿಕಂಠಾಭರಣದಲ್ಲಿ ಇವೆ.— "ಮಾಯೆಯು ಮಾಡಿದ ಪುರುಷ ನೀನಾದಡೆ, ನಿನ್ನ ಸತಿ ಅನಾದಿ ವಸ್ತುವಿನಿಂದಾದ ಮಾಯೆ, ಜಗತ್ ಸಿದ್ಧಾಂತ. ತಮ್ಮ ಮಾಯೆ ತಾವು ಮುಟ್ಟಿದೊಡೆ ನಿನ್ನ ಸೊಕ್ಕೆಂತೊ" (೧೦೭); "ಸರ್ವವಸ್ತು ಬ್ರಹ್ಮಾಂಶವೆಂದರಿಯದೆ ನುಡಿದು ಕೆಟ್ಟೆಯಲ್ಲ ಭಕ್ತಿಯಲ್ಲಿ" (೧೦೮); "ಶಿವಪ್ರಿಯ ಶಿವನ ಗಣಂಗಳು ಮುಟ್ಟಲಂಜುವರೆ" (೧೦೯); "ನಿಮ್ಮುದರದಲ್ಲಿ ಜನಿಸಿದ ಮಾಯೆ ಮಗಳಾದಳು. ಮಗಳ ಭೋಗಿಪ ಭಕ್ತರಾವಲ್ಲದೆ, ನಿಮ್ಮ ಸ್ವತಂತ್ರವೆ" (೧೧೮); "ಅಂತಪ್ಪ ಜಂಗಮ ನಿನ್ನ ಸತಿ ಮುಟ್ಟಿದಡೆ ಪಾವನವಲ್ಲದೆ ಪಾಪಿಯೆ" (೧೦೬). ಇದು ಮುಗ್ಧ ಮರುಳ ಭಾವುಕ ಜನರನ್ನು ದುರ್ಮಾರ್ಗಕ್ಕೆಳಸಲು ಮೋಸಮಾಡಲು ಆಡುವ ಕಪಟ

ವಾಜ್ಞಾಲ. ಈ ದುರುಳ ವೇದಾಂತದ ವಾಜ್ಞಾಲವನ್ನು ಪಸರಿಸಿ ದುರುಳ ಅನುಭಾವವನ್ನು ಸಹ ವಚನ ೫೫೧ ದಲ್ಲಿ ಹೀಗೆ ನುಡಿಯಲಾಗಿದೆ.— "ಹಾದರವಾಡಿದ ಕೃಷ್ಣಂಗೆ ನಿಮ್ಮ ದೇವರು ಪದವಿಯ ಕೊಟ್ಟ ಕಾರಣ ವೇನು ? ಹಾದರವಾಡಿದ ಶ್ವೇತಂಗೆ ನಿಮ್ಮ ದೇವರು ರುದ್ರ ಪದವಿಯ ಕೊಟ್ಟ ಕಾರಣವೇನು? ಹಾದರವಾಡುವ ನಿಮ್ಮ ಪಿಂಡ ಗಣಂಗಳೊಂದಿಗೆ ಗುಹೇಶ್ವರ ಲಿಂಗ ಅನುಭವ ಬೀರುವ ಕಾರಣವೇನು ?"

## F64 ಕೀಳುಮನ

ಸ್ತ್ರೀಯರ ಬಗೆಗೆ ಇರುವ ಗ್ರಂಥಕರ್ತನ ಕೀಳುಮನವು ವಚನಗಳಲ್ಲಿ ಹೇಳಿದ ಈ ನುಡಿಗಳಿಂದ ವ್ಯಕ್ತವಾಗುವುದು. ವೀರಶೈವರಲ್ಲಿ ಸ್ತ್ರೀಯರಿಗೆ ಪುರುಷರಷ್ಟೇ ಸ್ವಾತಂತ್ರ್ಯವು ಧಾರ್ಮಿಕ ಸಾಮಾಜಿಕ ಸಂಸಾರಿಕ ವಿಷಯಗಳಲ್ಲಿ ಉಂಟು. ಅವಳು ಹಿಂದೂ ಸಂಪ್ರದಾಯದಂತೆ ಪರರ—ಬಾಲ್ಯದಲ್ಲಿ ತಂದೆಯ, ಯೌವನ ದಲ್ಲಿ ಪತಿಯ, ವೃದ್ಧಾಪ್ಯದಲ್ಲಿ ಪುತ್ರನ—ಅಧೀನಳಲ್ಲ. ಇದಕ್ಕೆ ಅನೇಕ ನಿದರ್ಶನ ಗಳು ಹನ್ನೆರಡನೆಯ ಶತಮಾನದಿಂದಲೂ ಕಂಡುಬರುತ್ತವೆ. ಆದುದರಿಂದ ಗ್ರಂಥಕರ್ತನ ಈ ನುಡಿಗಳು, ಸ್ತ್ರೀಯರು ಭೋಗವಸ್ತುವೆಂಬ ಪರಿಯಲ್ಲಿ ನುಡಿದವುಗಳು, ಸ್ತ್ರೀಯರಿಗೆ ಅಪಚಾರವೆಸಗುತ್ತವೆ. — "ನಿನ್ನ ನುಡಿಯಲ್ಲಿ ಶಿವಶರಣರು ತಮ್ಮಂಗನೆಯರ ಭೋಗಿಸಕೂಡದೆಂಬೂಹೆ ತೋರ್ಪುದು"(೫೫); "ಭೋಗಿಪ ಭಕ್ತರ ಕೇಳ್ವುದಲ್ಲದೆ ನಿಮ್ಮ ಭಕ್ತನರಿವನೆ"(೫೬); "ಪತಿಯಾಧೀನ ಸತಿಯಿಪ್ಪ ಕಾರಣ" (೬೪); "ಮೀರಿದ ಮಾಯಾದೇವಿಯು ಸತಿಪತಿಯೀರ್ವರ ಮುರಿದಟ್ಟುವಳು ಕಾಮಕಲೆಯಲ್ಲಿ. ಸರ್ವಾಧೀನ ಸತಿಯಿದ್ದಂತೆ ರತಿ ಅಧೀನ ಸತಿ ಕಾಣೆ" (೬೫).

## F65 ಮನೋರಂಗ

ಗ್ರಂಥಕರ್ತನ—ಸ್ತ್ರೀಯರ ಸಂಬಂಧವಾದ ಮತ್ತು ಅವರು ಭೋಗವಸ್ತು ವೆಂದು ಪರಿಗಣಿಸುವ ಮತ್ತು ಹಾದರ ಮಾಡುವುದು ನಿಷಿದ್ಧವಲ್ಲವೆಂದು ಪ್ರತಿ ಪಾದಿಸಿರುವ—ಮನೋರಂಗವು ಮುಂದಿನ ವಚನ ೧೨೦ ರಿಂದ ೧೧೬ವರೆಗಿನ ಬಸವಣ್ಣ ಪ್ರಭುದೇವರ (ಇಲ್ಲಿಹೇಳಿರುವ ಪ್ರಭುದೇವರ ವಚನಗಳು ನಿಜವಾದವು

ಗಳಲ್ಲ, ಆದರೆ ದುಷ್ಟ ಹೇತುವಿನಿಂದ ಗ್ರಂಥಕರ್ತನಿಂದ ಸ್ವರಚಿತವಾದುವು) ಸಂವಾದ ರೂಪದಲ್ಲಿ ಹೇಳಿರುವ ಮೂಲಕ ಪ್ರಕಟವಾಗಿದೆ. ಮೊದಲಿಗೆ ೧೦೦–೧೦೪ ವರೆಗಿನ ಬಸವಣ್ಣನವರ ವಚನಗಳು ಬಂದಿವೆ. ಇವುಗಳು ಸ್ತ್ರೀಯರ ಶೀಲ ಗೌರವಗಳನ್ನು ಕಾಪಾಡುವ ಕುರಿತಾಗಿವೆ. ಇವು ಸೂಚ್ಯವಾಗಿ ಪೂಜೆಗೊಂಬ ಗಣಂಗಳ ಕುರಿತಾಗಿವೆ. ಪೂಜೆಗೊಂಬ ಸಂದರ್ಭದಲ್ಲಿ “ ತುಡುಗುಣಿತನದಲ್ಲಿ ಪರವಧುವ ನೋಡುವ ಸರಸ ಬೇಡ, ಶೂಳಸೊಕ್ಕು ತಲೆಗೇರಿ ರಾಣಿವಾಸದೊಡನೆ ಸರಸಬೇಡ; ನೋಡಲಾಗದು ನುಡಿಸಲಾಗದು ಪರಸ್ತ್ರೀಯ, ಬೇಡ ಕಾಣಿರೊ; ತೊರೆಯಿಂಬೊ ಪರನಾರಿಯರ ಸಂಗವ; ಕುಳ್ಳಿರ್ದ ಲಿಂಗವ ಪೂಜಿಸಿ ಅಲ್ಲದಾಟುವನಾಡುವರಯ್ಯ ಬೆಳ್ಳಿತ್ತಿನ ಮರೆಯಲ್ಲಿರ್ದು ಹುಲ್ಲಿಗಂಬುವ ತೊಡುವಂತೆ, ಕಳ್ಳಹಾದರಿಗನ ಕಯ್ಯಲ್ಲು ಪೂಜೆಯು ಕೊಳ್ಳ ನಮ್ಮ ಕೂಡಲ ಸಂಗಮದೇವ; ತನು ಶುಚಿಯಿಲ್ಲದವರ ದೇಹಾರ (ಪೂಜೆ) ವೇಕೊ ”.

## F66 ಪುನಃ ಪುನಃ

ಈ ವಚನಗಳನ್ನು ಒಮ್ಮೆಯೆ ಹೇಳಿರಲಾಗಿರದೆ ಇವುಗಳನ್ನು ಪುನಃ ಪುನಃ ಹೇಳಲಾಗಿದೆ. ಇವು ಪೂಜೆಗೊಂಬವರ ಗುಣ ಶೀಲ ಸ್ವಭಾವ ವ್ಯಕ್ತಿತ್ವ ಗಳಿಗೆ ಒರೆಯಾಗಿವೆ. ಇವುಗಳು ಈ ಆಚಾರ ಪ್ರಶಂಸೆ ಪ್ರಕರಣದ ಆರಂಭ ಮಧ್ಯ ಅಂತ್ಯಗಳಲ್ಲಿ ಉಕ್ತವಾಗಿವೆ. ಮೇಲಿನವು ಆರಂಭಸೂಚಕವಾಗಿದ್ದರೆ ಇವು ಮಧ್ಯದಲ್ಲಿ ೩೭೭, ೩೭೯, ೩೮೧ ವಚನಗಳಲ್ಲಿ, ಮತ್ತು ಕೊನೆಯಲ್ಲಿ ೫೩೧, ೫೪೬, ೫೪೭, ೫೪೮ ವಚನಗಳಲ್ಲಿ ಬಂದಿವೆ. ಮಧ್ಯದಲ್ಲಿ ಹೇಳಿರುವುದಕ್ಕೆ ಕಾರಣ ಇಲ್ಲವೆ ಉದ್ದೇಶವು ಸ್ಪಷ್ಟವಾಗಿ ಕಂಡುಬರುವುದಿಲ್ಲ. ಆದರೆ ಮೊದಲು ಹಾಗು ಕೊನೆಯಲ್ಲಿ ಹೇಳಿರುವುದಕ್ಕೆ ಗ್ರಂಥಕರ್ತನು ಉದ್ದೇಶವಿಟ್ಟುಕೊಂಡಿದ್ದಾನೆ. ಆರಂಭದಲ್ಲಿ ಇವುಗಳು ಬಸವಣ್ಣನನ್ನು ಹೀನಾಯಮಾನವಾಗಿ ದುಷ್ಟ ಶಬ್ದ ಗಳಿಂದ ಜರೆಯುಲು ಕಾರಣವಾಗುತ್ತವೆ; ಮತ್ತು ಕೊನೆಯಲ್ಲಿ ಹಾದರವನ್ನು ಎತ್ತಿ ಹಿಡಿಯುಲು ಕಾರಣವಾಗುತ್ತವೆ.

## F7 ಬಸವನಿಂದೆ

ಬಸವಣ್ಣನವರ ನಿಂದೆಯು ಮುಕ್ತಿಕಂಠಾಭರಣದಲ್ಲಿ ಇತರತ್ರ ಮೂರು

ಕಡೆಯಲ್ಲಿ ಬಂದಿದ್ದರೆ, ಬಸವಣ್ಣನವರು ಸ್ತ್ರೀಯರ ಶೀಲ ಗೌರವಗಳನ್ನು ಕಾಪಾಡಬೇಕೆಂದು ಹೇಳಿರುವ ವಚನಗಳು ಮೊದಲಿಗೆ ಬಂದಾಗ (ಕಲ್ಪಿತ) ಪ್ರಭುದೇವನಿಂದ ಈ ಸಂಬಂಧದಲ್ಲಿ ಸತತವಾದ ಹನ್ನೆರಡು ೧೦೫೫ ರಿಂದ ೧೧೬ ವಚನಗಳಲ್ಲಿ ವಿಪರೀತ ದುಷ್ಟ ಶಬ್ದಗಳಿಂದ ಅವರನ್ನು ಜರೆಯಲಾಗಿದೆ. ಜರೆಯಲಾಗಿರುವ ಈ ವಚನಗಳ ಪೂರ್ವದಲ್ಲಿ ಈ ವಾಕ್ಯಗಳು 'ಕಳ್ಳಹಾದರಿಗನ ಕಯ್ಯಲ್ಲು ಪೂಜೆಯ ಕೊಳ್ಳ; ತನು ಶುಚಿಯಿಲ್ಲದವನ ದೇಹಾರವೇಕೆ' ಬಂದಿವೆ. ಇವು ಕಲ್ಪಿತ ಪ್ರಭುದೇವನ ಅಂತರಂಗವನ್ನು ಚುಚ್ಚಿ ಮನನೋಯಿಸಿದಂತಾಗಿ ಬಸವಣ್ಣನನ್ನು ಬಯ್ಯಲು ಕಾರಣವಾದಂತೆ ಭಾಸವಾಗುತ್ತವೆ. ಅವನು ಬಸವಣ್ಣನನ್ನು ಈ ಪರಿಯಾಗಿ ಜರೆದಿದ್ದಾನೆ.—"ಮೂವತ್ತಾರು ಸಂವತ್ಸರ ಮಾಡಿದ ಭಕ್ತಿ ಹೋಮುವಲ್ಲಿ ಕತ್ತೆ ಮೂತ್ರ ಬಿಟ್ಟಂತಾಯಿತ್ತಯ್ಯಾ ಬಸವನ ನುಡಿ! ಇದೇತರನುಭವ ಇದೇತರ ಭಕ್ತಿ ಗುಹೇಶ್ವರ ಶರಣರ ಕೂಳಸೊಕ್ಕು ತಲೆಗೇರಿದುದ ಒರಸುವ ಚದುರ ಕಾಣಾ ಕಿನ್ನರಯ್ಯ; ಇಂತಪ್ಪ ಭಂಡ ಬಸವನ ಮುಖವ ನೋಡಲಾಗದು; ನಿನ್ನ ಸೊಕ್ಕೆಂತೋ ಗುಹೇಶ್ವರದೂರಬಸವ; ಗುಹೇಶ್ವರದೂರ ದುಷ್ಟ ಬಸವಾ; ಹುಳಬಿದ್ದ ಶ್ವಾನನಂತೆ ಬೊಗಳಿ ಬೋಳಾದಿಯಲ್ಲ ಗುಹೇಶ್ವರದೂರಬಸವಾ; ಗುಹೇಶ್ವರ ಕರುಣಿಸಿದ ಮರೆದೆಯಲ್ಲಾ ಭ್ರಷ್ಟ ಬಸವಾ; ಗುಹೇಶ್ವರ ದೂರ ಭ್ರಷ್ಟ ಬಸವಾ; ಮಸೆದಲಗಿನ ತಪ್ತತಾಪವಾಯಿತ್ತಲ್ಲಾ ಭ್ರಷ್ಟ ಬಸವಾ; ಸಾಕು ಸಾಕು ನಿನ್ನ ಪೂಜೆ ನಿನ್ನ ಭಕ್ತಿ ಗುಹೇಶ್ವರಲಿಂಗಕ್ಕೆ ಭ್ರಷ್ಟ ಬಸವಾ; ಗುಹೇಶ್ವದೂರ ಭ್ರಷ್ಟ ಬಸವಾ; ಆಗದಿಹುದೆ ನಾಯಕ ನರಕ ಭ್ರಷ್ಟ ಬಸವಾ; ಭ್ರಷ್ಟ ಬಸವಾ."

ಹೀಗೆ ಬಸವಣ್ಣನನ್ನು ಜರೆದುದಕ್ಕೆ ಚನ್ನಬಸವಣ್ಣನು "ಆಡಿದ ನುಡಿಯಲ್ಲಿ ಆಚಾರ್ಯನಪರಾಧವಾವುದು? ಮನಕ್ಕೆ ಬಾರದಿದ್ದಡೆ ಒಲಿದು ಹೇಳುವುದು ಕ್ರಮವಿಡಿದು, ಹೇಳಿದ ಸುಬೋಧೆಯ ದುರ್ಬೋಧೆಯೆಂದರಿದು ಒರೆದು ದೂಷಿಸಿದ ಕಾರಣ; ಆಚಾರ ನಿಮಿತ್ತ ನುಡಿದರಲ್ಲದೆ ಅನಾಚಾರ ನಿಮಿತ್ತ ನುಡಿದರೆ ಮಹೇಶ್ವರ ಸ ಲದ ರೀತಿಯ" (೧೪೬–೭) ಮುಂತಾಗಿ ಬಸವಣ್ಣನ ನುಡಿಗಳನ್ನು ಸಮರ್ಥಿಸಿ ಪ್ರಭುದೇವರು ನಿಂದಿಸಿದುದು ದೋಷವೆಂದು ಹೇಳುತ್ತಾನೆ.

## F71 ಹಾದರ

ಇನ್ನು ಗ್ರಂಥದ ಕೊನೆಯಲ್ಲಿ ಇವೇ ವಚನಗಳನ್ನು ಬಳಸಿ ಹಾದರವನ್ನು ಗ್ರಂಥಕರ್ತನು ಹೇಗೆ ಪ್ರತಿಪಾದಿಸಿದ್ದಾನೆಂಬುದನ್ನು ಹೇಳುವುದು ಸಮುಚಿತವಾಗಿದೆ. ವಚನ ೫೩೧ ವಲ್ಲಿ "ಕಳ್ಳಹಾದರಿಗನ ಕೈಯಲ್ಲಿ ಪೂಜೆಯಕೊಳ್ಳ ನಮ್ಮ ಕೂಡಲಸಂಗಮದೇವ" ಎಂಬ ಬಸವಣ್ಣನವರ ವಚನಕ್ಕೆ ಪ್ರತಿಯಾಗಿ ಪ್ರಭುದೇವನು "ಹಾದರ ಮಾಡದಿರೆ ಪುಣ್ಯಪುರುಷ ತಾನೆಯಪ್ಪನಯ್ಯಾ. ಮೊದಲು ಲಿಂಗವನರ್ಚಿಸಿ ಪಾಪವ ಕಳೆದ ಭಕ್ತ ಗುಹೇಶ್ವರ ಲಿಂಗದಂಘ್ರಿಯ ಕಾಣನೆ" ಎಂದಿರುವುದಕ್ಕೆ ವಿರುದ್ಧವಾಗಿ ಚನ್ನಬಸವಣ್ಣನು "ಲಿಂಗವ ಪೂಜಿಸಿದಡೇನು ಹಾದರ ಮಾಡಿದವನ ಪೂಜೆ ಹಾಳುಮನೆಯ ದೀಪ"ವೆಂದಿದ್ದಾನೆ. ಇದಕ್ಕೆ ಪ್ರಭುದೇವರು ಈ ರೀತಿಯಾಗಿ ವಾದ ಹೂಡುತ್ತಾರೆ—"ಹಾದರವಾಡದಿರೆ ಶಿವನ ಪೂಜೆಯದೇಕೊ, ಪಾಪವ ಮಾಡದಿರೆ ಪರಮನ ಅರ್ಚನೆಯದೇಕೋ, ಹಾದರವಾಡಿ ಹರನನರ್ಚಿಸಿದಡೆ ದೋಷವಿಲ್ಲೆಂದ ನಮ್ಮ ಗುಹೇಶ್ವರಲಿಂಗವು". ಮುಂದೆ ಕೆಲವು ವಚನಗಳ ಪರ್ಯಂತ ವಿಷಯಾಂತರ ಮಾಡಿದನಂತರ ಕಿನ್ನರ ಬ್ರಹ್ಮಯ್ಯನು "ಹಾದರ ಸಲ್ಲದು ಕಾಣಾ" ಎನ್ನುತ್ತಾನೆ. ಕಿರಾತ ಸಂಗಯ್ಯನು "ಹಾದರವೆಂಬುದು ಕಾಲನ ಕಾಡಗಿಚ್ಚು, ಹಾದರವೆಂಬುದು ಭವದ ಸಮುದ್ರ, ಹಾದರವೆಂಬುದು ಕಿರಾತ ಸಂಗಲಿಂಗನ ಪದವಿಯ ಕೇಡು" ಎಂದು ನುಡಿಯುತ್ತಾನೆ. ಸಗರದ ಬೊಮ್ಮಯ್ಯನು "ಹಾದರವಾಡಿದಲ್ಲಿ ಮುಕ್ತಿ ಇಲ್ಲೆಂದು ಸತಿಪತಿಯ ನೇಮಿಸಿದರಯ್ಯಾ ಹರಗಣಂಗಳು ವಿವಾಹ ಕಟ್ಟಿನಿಂದ, ಹಾದರವಾಡಿದಲ್ಲಿ ಸುಕೃತವಿಲ್ಲೆಂದುಸುರಿದರಯ್ಯ" ಎನ್ನುತ್ತಾನೆ. ಇಷ್ಟಾದರೂ ಪ್ರಭುವು ತನ್ನ ಅಭಿಪ್ರಾಯ ಸಮರ್ಥನೆಗಾಗಿ ಹಾದರವಾಡಿಯೂ ಪರಲೋಕ ಪದವಿಯ ಪಡೆದ ಕೃಷ್ಣ ಕ್ರೀತ ಮಿಂಡಗಣಂಗಳ ಉದಾಹರಣೆಗಳನ್ನು ಹೇಳುತ್ತಾನೆ. ಇದಕ್ಕೆ ಚನ್ನಬಸವಣ್ಣನು ನಿರುಪಾಯನಾಗಿ "ಅಂದ ತೆರದಿ ನಮ್ಮ ದೇವರು ಪದವಿಯ ಕೊಟ್ಟಡೆ ಹಾದರ ಮಾಡುವುದಯ್ಯಾ ನೀವು, ಮಾಡದಿದ್ದಡೆ ಪ್ರಮಥರಾಣೆ. ನೀವಾಡಿ ನಾವಾಡದಿರ್ದಡೆ ನಮಗೆ ಪ್ರಮಥರಾಣೆ" (ಇದು ನಿಜವಾದ ವಚನ

ವಲ್ಲ; ಕೃತಕ ವಚನವಾಗಿದೆ) ಎಂದೆನ್ನುತ್ತಾನೆ. ಇದಕ್ಕೆ ಪ್ರಭುವು "ಒಬ್ಬ ನಿಚ್ಚೆ ಸ್ತ್ರೀಗತವಾಗಿಪ್ಪುದು. ಒಬ್ಬನಿಚ್ಚೆ ಸ್ತ್ರೀವಿಗತವಾಗಿಪ್ಪುದು.... ಗುಹೇಶ್ವರ ಶರಣ ಸಂಗನಬಸವಯ್ಯನಾಜ್ಞೆ ಮಸಿಯಾಯಿತ್ತಲ್ಲ ಚನ್ನಬಸವಣ್ಣಾ", ಎಂದು ನುಡಿದು ಚನ್ನಬಸವಣ್ಣನಿಂದ ಹಾದರಕ್ಕೆ ಒಪ್ಪಿಗೆಯನ್ನು (ಕೃತಕ ವಚನದಿಂದ) ಪಡೆಯುವಲ್ಲಿ ಸಾಹಸ ಮಾಡಿದ್ದಾನೆ, ಔಚಿತ್ಯವನ್ನು ಕಂಡುಕೊಂಡಿದ್ದಾನೆ (ಏಕೆಂದರೆ ಚನ್ನಬಸವಣ್ಣನು ಬ್ರಹ್ಮಚಾರಿ; ಮತ್ತು "ಪರರ ಹೆಣ್ಣಿಗೆ ಕಣ್ಣಿಡ-ದಿಹುದೇ ಒಂದನೆಯ ಆಚಾರ" (ಚ. ಬ. ವಚನ ೧೧೨) ಎಂದು ಆಚಾರ ಗಳಲ್ಲಿ ಪ್ರಥಮ ಪ್ರಾಶಸ್ತ್ಯವನ್ನು ಕೊಟ್ಟಿರುವನು; ಮತ್ತು "ವೀರಶೈವನಾದಡೆ ಪರಧನವ ಪರಸತಿಯರ ಮುಟ್ಟದಿರಬೇಕು" (ಚ. ಬ. ವಚನ ೨೪೯) ಎಂದು ವೀರಶೈವರ ಲಕ್ಷಣವನ್ನು ಹೇಳಿರುವನು). ಇದಲ್ಲದೆ ಬಸವಣ್ಣನವರ ಸ್ತ್ರೀಯರ ಶೀಲ ಗೌರವಗಳನ್ನು ಕಾಪಾಡಬೇಕೆಂಬ ಆಜ್ಞೆ ಮತ್ತು ಪರಸತಿಯರೊಲ್ಲೆ ನೆಂಬಲ್ಲಿ ಛಲ ಇವು ಮಸಿ(ಭಂಗ)ವಾಯಿತ್ತಲ್ಲ ಎಂದು ಹಂಗಿಸಿ ನುಡಿಯಲಾಗಿದೆ. ಹೀಗೆ ಹಾದರವ ಬಗ್ಗೆ ನುಡಿದ ವಚನಗಳಾವುವೂ ನಿಜವಾದವುಗಳಲ್ಲ, ಕೃತಕ ವಾಗಿವೆ. ಅಂತೂ ಇಂತೂ ಗ್ರಂಥವನ್ನು ಹಾದರಕ್ಕೆ ದೋಷವಿಲ್ಲೆಂದು ಹೇಳಿ ಅದಕ್ಕೆ ಮನ್ನಣೆಯನ್ನು ಕೊಟ್ಟು ಮುಗಿಸಿದ್ದಾನೆ. ಇದನ್ನು 'ಆಚಾರ ಪ್ರಶಂಸೆ' ಎಂದು ಹೇಳಲು ೫೫೫ ವಚನಗಳ ಮೂಲಕ ಹೆಣಗಿದ್ದಾನೆ.

## F8 ನೀತಿ

ಸ್ತ್ರೀಯರ ಬಗ್ಗೆ ಗೌರವಾದರಗಳನ್ನು ಹೊಂದಿರುವುದು ಅವರ ಶೀಲ ವನ್ನು ಕಾಪಾಡುವುದು ಹಿಂದೂ ಧರ್ಮದ ಸತ್ವವಾಗಿದೆ, ತಿರುಳಾಗಿದೆ. ಭಾರತೀಯ ಇತಿಹಾಸವು ಇದನ್ನೇ ನಿದರ್ಶಿಸುತ್ತದೆ. ಪರಸ್ತ್ರೀ ಪರಪುರುಷರ ಸಂಪರ್ಕ ಬರುವ ಪ್ರಸಂಗದಲ್ಲೆಲ್ಲ ಎಚ್ಚರವಹಿಸಲಾಗುತ್ತದೆ. ಪೂರ್ವಕಾಲ ದಲ್ಲಿ ಶಿಷ್ಯನು ಗುರುವಿನ ಗ್ರಹದಲ್ಲಿಯೇ ವಾಸವಾಗಿ ಅವನ ಕುಟುಂಬದೊಂದಿಗೆ ಹೊಂದಿಕೊಂಡಿರುತ್ತಿದ್ದನಾದ ಕಾರಣ ಇಂತಹ ಸಂಪರ್ಕದ ದುರ್ಲಾಭವನ್ನು ಪಡೆಯಬಾರದೆಂದು 'ಗುರುಪತ್ನೀಗಮನ'ವನ್ನು ಪಂಚಮಹಾಪಾತಕಗಳ-ಲ್ಲೊಂದನ್ನಾಗಿ ಪರಿಗಣಿಸಲಾಗುತ್ತದೆ.

ಲಿಂಗವಂತರಲ್ಲಿ ಪುರುಷರಂತೆ ಸ್ತ್ರೀಯರಿಗೂ ಪೂಜೆ ಮತ್ತು ಆಚರಣೆಗಳಲ್ಲಿ ಸಮಾನಾವಕಾಶಗಳುಂಟು. ಪರಸ್ತ್ರೀ ಪರಪುರುಷರ ಸಂಪರ್ಕವು— ಅದೂ ವಿಶೇಷವಾಗಿ ಪಾದಪೂಜೆಯಲ್ಲಿ— ಒದಗುವುದುಂಟು. ಆದಕಾರಣ ಸ್ತ್ರೀಯರ ಶೀಲ-ಗೌರವಗಳನ್ನು ಕಾಪಾಡಲು ಬಸವಣ್ಣನವರು ಮೇಲಿನಂತೆ ನುಡಿದಿದ್ದಾರೆ. ಆದರೆ, ಕಾಮುಕ ಹಾಗು ಸ್ತ್ರೀಯರು ಭೋಗವಸ್ತುವೆಂದು ಬಗೆಯುವ ಕಳ್ಳ-ಹಾದರಿಗ ಗ್ರಂಥಕರ್ತನಿಗೆ ಇದು ಸರಿಬರದೆ ಬಸವಣ್ಣನವರನ್ನು ಕೀಳಾಗಿ ಜರೆಯುತ್ತಾನೆ.

## F9 ಮಂಕುಬೂದಿ

ಮೇಲಧಿಕಾರಿಗಳ ಗಮನಕ್ಕಾಗಿ ಹೊರಡಿಸಿದ ಸ್ಪಷ್ಟೀಕರಣ (ನಂತರದಲ್ಲಿ ಪತ್ರಿಕೆಗಳಲ್ಲಿ ಪ್ರಕಟವಾದ) ದಲ್ಲಿ ಈ ವಚನ IV ೫೧ಕ್ಕೆ 'ಸಾಮಾನ್ಯ ಜೀವನದ ಅಂಗಭೋಗದ ಆಕಾಂಕ್ಷೆಗಳು ಲಿಂಗಭೋಗವಾಗಬೇಕೆಂಬುದು' ಇದರ ಆಶಯವಾಗಿದೆ ಎಂದು ಸಂಪಾದಕರು ಹೇಳಿದ್ದಾರೆ; ಮತ್ತು ಪರಸ್ತ್ರೀಸಂಗ ವ್ಯಾಮೋಹವೆಂಬ ಅಗ್ನಿಕೃತ್ಯವಾದರೆ ಇಷ್ಟಲಿಂಗಸಿದ್ಧಿ ಮುಂತಾಗಿ ತಾತ್ಪರ್ಯ ಹೇಳಿದ್ದಾರೆ. ಆದರೆ ಆ ವಚನದ ಪೂರ್ವಾಪರದಲ್ಲಿ ಹೇಳಿದುದನ್ನು ನೋಡಿದರೆ ಇದಕ್ಕೆ ಯಾವ ಬಗೆಯ ಸಮರ್ಥನೆಯೂ ಪುಷ್ಟಿಯೂ ದೊರಕುವುದಿಲ್ಲ. ಪೂರ್ವದ ವಚನದಲ್ಲಿ ಹೇಳಿದ 'ಮನದಿಷ್ಟಪೂರ್ಣ' ಇಷ್ಟಲಿಂಗಸಿದ್ಧಿಯೆಂದಿದೆ; ಪ್ರಸ್ತುತ ವಚನದಲ್ಲಿ ಪರಸ್ತ್ರೀ ಸಂಗದಿಂದ ಇಷ್ಟಲಿಂಗಸಿದ್ಧಿ (ಅಂದರೆ ಮನದಿಷ್ಟಪೂರ್ಣ) ಎನ್ನಲಾಗಿದೆ. ಇದರ ನಂತರದ ವಚನದಲ್ಲಿ ಇಂತಹ ವಿಷಯವಾಸನೆ ಮತ್ತು ಅದರಲ್ಲಿ ಅಡಗಿರುವ ಪಾಪರೇಣು ಕುರಿತು ನುಡಿದುದಾಗಿದೆ. ಮತ್ತು ಅನಂತರದ ವಚನದಲ್ಲಿ ಪರಸ್ತ್ರೀ ಸಂಗವು ಇಷ್ಟಲಿಂಗಸಿದ್ಧಿಯಾದರೆ ತನ್ನಂಗನೆಯರ ಕೂಟದ ಪರಿಣಾಮವೇನು ? ಅದೇನು ಪರಸ್ತ್ರೀಸಂಗದಂತೆ ಪಾರಮಾರ್ಥಿಕ ಕೂಟವೊ ಇಲ್ಲವೆ ಪ್ರಾಪಂಚಿಕ ಬೇಟವೋ (ಸಂಭೋಗವೊ) ಎಂಬ ಪ್ರಶ್ನೆ ಎತ್ತಲಾಗಿದೆ. ಆದುದರಿಂದ ಸಂಪಾದಕರು ಹೇಳಹೊರಟಿರುವ ಆಶಯವು ಭಾವಾರ್ಥವು ಎಳ್ಳಷ್ಟೂ ಸಮಂಜಸವಾಗಿಲ್ಲ, ಸಮರ್ಪಕವಾಗಿಲ್ಲ. ಆದುದರಿಂದ ಇಲ್ಲದ ಸಲ್ಲದ ವಿಪರೀತ ಬಗೆಯಲ್ಲಿ ಈ ಪರಿಯ ಮಂಕುಬೂದಿಯನ್ನು ಎರಚುವುದು ಪರಿಣಾಮಕಾರಿಯಾಗುವುದಿಲ್ಲ, ಯೋಗ್ಯವಾಗುವುದಿಲ್ಲ.

————

# G ಪರಿಕ್ರಮ

## G1 ವಿಷಯ

ಮುಕ್ತಿಕಂಠಾಭರಣದಲ್ಲಿ ವಚನಗಳ ಮೂಲಕ ವ್ಯಕ್ತಿಗಳ ಸಾನಿಧ್ಯ ಹಾಗು ಅವರವರ ಮಹತ್ವವನ್ನು ತೋರ್ಪಡಿಸಿರುವುದರಲ್ಲಿ ಪ್ರಭುದೇವರು ಪ್ರಥಮ ಸ್ಥಾನವನ್ನು ಪಡೆದಿದ್ದಾರೆ; ಅವರ ವಚನಗಳು ೨೬೫ ಇವೆ. ಬಸವಣ್ಣನವರ ವಚನಗಳು ೧೦೦ ಇವೆ; ಅವರಿಗೆ ದ್ವಿತೀಯ ಪ್ರಾಮುಖ್ಯತೆಯು ದೊರಕುವದು. ಆದುದರಿಂದ ಬಸವಣ್ಣನವರ ವಚನಗಳನ್ನು ವಿಶ್ಲೇಷಿಸಿ ಹಾಗು ಒರೆದು ನೋಡುವುದು ಈ ಗ್ರಂಥದಲ್ಲಿಯ ವಿಷಯದ ದೃಷ್ಟಿಯಿಂದ ಕ್ರಮಪ್ರಾಪ್ತವಾಗಿದೆ. ಅಲ್ಲದೆ ಬಸವಣ್ಣನವರ ದೂಷಣೆಯ ಮೂಲಕ ಹಾಗು ಅವರು ಪ್ರಸ್ತಾಪಿಸಿದ ಸ್ತ್ರೀಯರ ಸಂಬಂಧವಾದ ನೀತಿ, ಶೀಲ ಮತ್ತು ಆಚಾರವನ್ನು ಖಂಡಿಸಿರುವ ಮೂಲಕ ಈ ಗ್ರಂಥವು ಹೇಯವಾಗಿದೆ, ತುಚ್ಛವಾಗಿದೆ, ಬಹಿಷ್ಕೃತವಾಗಿದೆ ಎಂಬುದು ಸಿದ್ಧವಾಗುತ್ತದೆ.

## G2 ಬಸವಣ್ಣನ ವಚನ

ಮುಕ್ತಿಕಂಠಾಭರಣದಲ್ಲಿ ಹೇಳಿರುವ ವಚನಗಳಲ್ಲಿ ೭೭ ವಚನಗಳು ಕ. ವಿ. ವಿ. ಪ್ರಕಟಪಡಿಸಿದ(೧೯೬೮) "ಬಸವಣ್ಣನವರ ವಚನಗಳು"ಗ್ರಂಥದಲ್ಲಿ ದೊರಕುವವಾದುದರಿಂದ ಅವು ನಿಜವಾದ ವಚನಗಳೆಂದು ಪ್ರಮಾಣಿತವು, ಉಳಿದವುಗಳೆಲ್ಲವೂ ಕೃತಕವೆಂದು ಸಿದ್ಧವಾಗುತ್ತದೆ. ಇವುಗಳಲ್ಲಿ ೧೨ ವಚನಗಳು ಪುನರಪಿ ಹೇಳಲಾಗಿವೆ. ಇದರಲ್ಲಿಯ ೮ ಮಾಹೇಶ್ವರ (ಕ. ವಿ. ವಿ. ಪ್ರಕಟನೆಯ ಸ್ಥಲಾನುಕ್ರಮ ಏರ್ಪಾಟಿನ ಪ್ರಕಾರ) ಸ್ಥಲಕ್ಕೆ ಸೇರಿರುತ್ತವೆ; ಮತ್ತು ೪ ಪ್ರಾಣಲಿಂಗಿಯ ಸ್ಥಲಕ್ಕೆ ಸೇರಿರುತ್ತವೆ. ಇವುಗಳೆಲ್ಲವೂ ಮುಕ್ತಿಕಂಠಾಭರಣದಲ್ಲಿ 'ಆಚಾರ ಪ್ರಶಂಸೆ'ಯಾಗಿ ಸೇರ್ಪಡೆಯಾಗಿವೆ.

### G21 ವಿವೇಚನೆ

ಮೂಲ ಗ್ರಂಥಗಳಿಂದ ವಚನಗಳನ್ನು ಎತ್ತಿಕೊಳ್ಳುವಾಗ ಮುಕ್ತಿಕಂಠಾ-ಭರಣದ ಗ್ರಂಥಕರ್ತನು ವಿವೇಚನಾಯುಕ್ತನಾಗಿ ವಿಷಯಕ್ಕೆ ಅನುಗುಣ-

ವಾಗಿರುವಂತೆ ಆಯ್ದುಕೊಂಡಿರುವನೋ ಇಲ್ಲವೆ ಅಲ್ಲಿಂದಿಷ್ಟು ಇಲ್ಲಿಂದಿಷ್ಟು ವಚನಗಳನ್ನು ಎಂತೆಂತೋ ತೆಗೆದುಕೊಂಡಿರುವನೋ ಎಂಬುದು ಆಲೋಚನೀಯವಾಗಿದೆ. ಈ ವಿಶ್ಲೇಷಣೆಯು ಈ ದಿಶೆಯಲ್ಲಿ ಬೆಳಕು ಚಲ್ಲುವದು :— ಬಸವಣ್ಣನವರ ವಚನಗಳಿಂದ (ಕ. ವಿ. ವಿ. ಪ್ರಕಟನೆ ಸಂದರ್ಭ) ವಚನ ೧೬೪-೫, ೧೬೮ ಭಕ್ತನ ತಾಮಸ ನಿರಸನ ಸ್ಥಲ; ವಚನ ೩೬೭ ರಿಂದ ೩೭೦ ಭಕ್ತಸ್ಥಲ; ೬೩೯ ರಿಂದ ೬೪೬ ಮತ್ತು ೬೬೦-೨ ಮಾಹೇಶ್ವರ ಸ್ಥಲ; ೭೬೬-೮ ಪ್ರಸಾದಿ ಸ್ಥಲ; ಮತ್ತು ೮೧೪-೨೪ ಪ್ರಾಣಲಿಂಗಿ ಸ್ಥಲ ಇವುಗಳಿಂದ ಎತ್ತಿಕೊಂಡವು ಆಗಿವೆ. ಇದರಂತೆಯೆ ಪ್ರಭುದೇವರ ವಚನಗಳ ವಿಶ್ಲೇಷಣೆಯನ್ನು (ಅಲ್ಲಮ ವಚನ ಚಂದ್ರಿಕೆಯೊಂದಿಗೆ) ನಡೆಸಿದಾಗ ಇಂತು ಕಂಡುಬರುವದು.— ೧೬೦-೧೭೧ ಪ್ರಸಾದಿ ಸ್ಥಲ ಮತ್ತು ೧೭೪-೭೭ ಪ್ರಾಣಲಿಂಗಿಸ್ಥಲ ಇವುಗಳಿಗೆ ಸಂಬಂಧಿಸಿದವು ಆಗಿವೆ.

## G3 ಚನ್ನಬಸವಣ್ಣನ ವಚನ

ಹೀಗೆಯೇ ಚನ್ನಬಸವಣ್ಣನವರ ವಚನಗಳ ವಿಷಯವಾಗಿಯೂ ಹೇಳಬಹುದು. ಮುಕ್ತಿಕಂಠಾಭರಣದಲ್ಲಿ ಚನ್ನಬಸವಣ್ಣನವರ ಅಂಕಿತವಿರುವ ವಚನಗಳು ೮೨ ಇರುವುವಾದರೂ ಕ. ವಿ. ವಿ. ಪ್ರಕಟಿಸಿದ (೧೯೬೫) ಚನ್ನಬಸವಣ್ಣನವರ ವಚನಗಳ ಗ್ರಂಥಮೊಂದಿಗೆ ಪರಿಶೀಲಿಸಿದಾಗ ಅದರಲ್ಲಿಯ ಕೇವಲ ೧೪ ವಚನಗಳು ಮಾತ್ರ ನಿಜವಾದವು ಮತ್ತು ಮಿಕ್ಕವುಗಳು ಕೃತಕವಾದವು ಎಂದು ಕಂಡುಬರುವದು. ಮುಕ್ತಿಕಂಠಾಭರಣ ಗ್ರಂಥದಲ್ಲಿ ಬಹುಭಾಗ (ಮುಕ್ಕಾಲು ಪಾಲು) ಆಚಾರ ಪ್ರಶಂಸೆಗೆ ಮೀಸಲಾಗಿರುವ ವಚನಗಳು ವಾಸ್ತವಿಕವಾಗಿ ಚನ್ನಬಸವಣ್ಣನವರವು* ಆಗಿರಬೇಕಾಗಿತ್ತು; ಏಕೆಂದರೆ ಅವರು ಷಟ್‌ಸ್ಥಲ ಚಕ್ರವರ್ತಿ. ಆಚಾರ (ವಚನ ೧೧೨ ನೋಡಬಹುದು) ವಿಚಾರಗಳಲ್ಲಿ ಅವರು ನುಡಿದುದೇ ವೇದವಾಕ್ಯದಂತೆ ಪ್ರಾಮಾಣ್ಯವಾದುದು. ಅವರ ವಚನಗಳು

* ಸ್ವತಃ ಗ್ರಂಥಕರ್ತನೇ ವಚನ IV ೨೪ ದಲ್ಲಿ “ಆಚಾರದ ಸಿಲುಕಡೆ ಚನ್ನಬಸವಣ್ಣ ಬಲ್ಲ” ಎಂದಿದ್ದಾನೆ.

ಆಚಾರವನ್ನು ಸಮಗ್ರವಾಗಿ ಅರುಹುತ್ತವೆ. ಹೀಗಿರಲು ತೋರಿಕೆಗಾಗಿ ಮಾತ್ರ ಅವರವಾದ ಕೇವಲ ೧೪ ವಚನಗಳನ್ನು ಎತ್ತಿಕೊಂಡು ಮಿಕ್ಕವುಗಳನ್ನು ಸ್ವಯಂ ಕಲ್ಪಿಸಿ ಅವಕ್ಕೆ ಚನ್ನಬಸವಣ್ಣನವರ ಅಂಕಿತವನ್ನು ಅಂಟಿಸಿ ಅವೆಲ್ಲವೂ ವಿಶ್ವಸನೀಯವೆನ್ನುವಂತೆ ಗ್ರಂಥಕರ್ತನು ತೋರಿಸಿದ್ದಾನೆ. ಚನ್ನಬಸವಣ್ಣನವರ ವಚನಗಳ ಆಯ್ಕೆಯ ಪರಿಯನ್ನು ನೋಡಿದಾಗ ಹೀಗೆ ಕಂಡುಬರುವುದು.—೩೭೬–೮, ೩೮೫, ೩೯೯, ೪೦೧, ೪೨೪ ಸಂಖ್ಯೆಯ ವಚನಗಳು ಮಾಹೇಶ್ವರಸ್ಥಲಕ್ಕೆಸಂಬಂಧಿಸಿದುವು; ೮೪೦–೨ ಪ್ರಾಣಲಿಂಗಿ ಸ್ಥಲಕ್ಕೆ, ೧೧೯ ಶರಣ ಸ್ಥಲಕ್ಕೆ, ೧೪೦೩, ೧೪೦೬, ೧೪೦೮ ಐಕ್ಯಸ್ಥಲಕ್ಕೆ ಸಂಬಂಧಿಸಿದವು ಆಗಿವೆ. ಇದರಲ್ಲಿ ಕುಂದು ಕೊರತೆ ಸ್ಪಷ್ಟವಾಗಿ ಕಂಡುಬರುವುದೇನಂದರೆ–ಭಕ್ತಸ್ಥಲದ ವಚನಗಳು ಇಲ್ಲದಿರುವುದು.

## G4 ಆಚಾರ

ಈ ದಿಸೆಯಲ್ಲಿ ಇನ್ನೂ ವಿಶೇಷವೇನಂದರೆ—ಮುಕ್ತಿಕಂಠಾಭರಣದಲ್ಲಿ ಹೇಳಿರುವ ಆಚಾರ ಪ್ರಶಂಸೆಯು ವಾಸ್ತವಿಕವಾಗಿ ಭಕ್ತಸ್ಥಲ, ಮಹೇಶ್ವರ ಸ್ಥಲಗಳಿಗೆ ಸಂಬಂಧಿಸಿದವು ಆಗಿರಬೇಕು. ಏಕೆಂದರೆ ದೇಹ, ಇಂದ್ರಿಯ ಇವುಗಳ ವಶವರ್ತಿಯಾಗಿರುವ ಮನಸ್ಸು ಇವುಗಳ ಕುರಿತಾದ ಆಚಾರದ ವಚನಗಳು ಭಕ್ತ ಮತ್ತು ಮಾಹೇಶ್ವರ ಸ್ಥಲಗಳಿಗೆ ಸಂಬಂಧಿಸಿರುತ್ತವೆ. ಮುಂದಿನ ಮೆಟ್ಟಲುಗಳಾದ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಇವುಗಳು ಆಚಾರವನ್ನು ಕುರಿತಾಗಿ ಇರುವುದಿಲ್ಲ. ಪರಂತು ಅನುಭಾವ, ಮಹಾನುಭಾವ ಕುರಿತಾಗಿ ಅಂದರೆ ಆಚಾರದ ಎಲ್ಲೆಯನ್ನು ಮೀರಿ ಇರುವವು; ಆದುದರಿಂದ ಇವು ದೈಹಿಕ-ಐಂದ್ರಿಕ ಮಾನಸಿಕ ವ್ಯವಹಾರಕ್ಕೆ ಅತೀತವಾಗಿರುವವು. ಆದುದರಿಂದ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಸ್ಥಲಗಳಿಗೆ ಸಂಬಂಧಿಸಿದ ವಚನಗಳನ್ನು ಆಚಾರ ಪ್ರಶಂಸೆ ಎಂಬ ಪ್ರಕರಣದಲ್ಲಿ ಹೇಳಿರುವುದು ವಿಷಯಾಂತರವಾಗಿರುವದು ಅಷ್ಟೇ ಅಲ್ಲದೆ ವಿಸಂಗತವೂ ಆಗಿದೆ.

## G5 ಬಸವಣ್ಣ

ಇಲ್ಲಿ ಉಕ್ತವಾದ ವಚನಗಳ ಮೇಲಿಂದ ಗ್ರಂಥಕಾರನು ವಚನಕಾರರ ವ್ಯಕ್ತಿತ್ವ ನಿರೂಪಣೆಯನ್ನು ಹೇಗೆ ಮಾಡಿದ್ದಾನೆ ಎಂಬುದು ಗಮನೀಯ

ವಾಗಿದೆ. ಪ್ರಥಮವಾಗಿ ಬಸವಣ್ಣನವರ ಬಗೆಗೆ ಆಲೋಚಿಸೋಣ. ಆಚಾರದ ಕುರಿತು ಬಸವಣ್ಣನವರ ವಚನಗಳನ್ನು ಅನೇಕವಾಗಿ ಹೇಳಿದ್ದರೂ ಅವರ ವಚನಗಳಲ್ಲಿ ಸ್ತ್ರೀಯರ ಶೀಲ ಗೌರವಗಳನ್ನು ಕಾಪಾಡಬೇಕೆಂಬ ವಿಚಾರವುಳ್ಳ ವಚನಗಳ ಕುರಿತು ಅವರನ್ನು ಅನೇಕ ದುಷ್ಟ ಶಬ್ದಗಳಿಂದ ಅವರ ಹಾಗು ಇತರ ಶರಣರ ಸಮ್ಮುಖದಲ್ಲಿಯೇ ಜರಿಯಲಾಗಿದೆ. "ಅನ್ಯರಿಗೆ ಅಸಹ್ಯಪಡಬೇಡ, ಇದಿರು ಹಳಿಯಲು* ಬೇಡ" ಎಂಬ ಸದಾಚಾರವನ್ನು ಬೋಧಿಸಿದವರನ್ನು ಪರಿಪರಿಯಾಗಿ ಜರಿದುದು (ಇವೆಲ್ಲವು ಗ್ರಂಥಕರ್ತನ ಕೃತಕ ವಚನಗಳು ಎಂಬುದು ಲಕ್ಷ್ಯದಲ್ಲಿಡಬೇಕು) ಎಂತಹ ವಿಕಟ ಅಟ್ಟಹಾಸ, ಎಂತಹ ದುಷ್ಟಬುದ್ಧಿ! ಇವಲ್ಲದೆ ಮತ್ತೂ ಕೃತಕ ವಚನಗಳಿಂದ "ಬಸವಯ್ಯನಾಡಿದುದು ನಿಜವಲ್ಲ, ಆತ ತಳವಿಲ್ಲದ ಮಗಿಯು", "ಬಸವನ ನುಡಿ ಕಸವಾಯಿತ್ತಲ್ಲ"; "ಸಂಗನಬಸವಯ್ಯನಾಜ್ಞೆ ಮಸಿಯಾಯಿತ್ತಲ್ಲ" ಮುಂತಾಗಿ ಹೇಳಿ ಬಸವಣ್ಣನವರನ್ನು ಹೀಯಾಳಿಸಿ ಅವರ ವ್ಯಕ್ತಿತ್ವ ಹನನ ಮಾಡಲಾಗಿದೆ. ಹೊರತಾಗಿ "ಮೂವತ್ತಾರು ಸಂವತ್ಸರ ಮಾಡಿದ ಭಕ್ತಿ ಹೋಮದಲ್ಲಿ ಕತ್ತೆ ಮೂತ್ರ ಬಿಟ್ಟಂತಾಯಿತ್ತಯ್ಯಾ, ಬಸವನ ನುಡಿ" ಎಂಬಂತೆ ನುಡಿದು ಬಸವಣ್ಣನವರ ಮಹತ್ಕಾರ್ಯದ ಹನನವನ್ನು ಸಹ ಮಾಡಲಾಗಿದೆ; ಮತ್ತು ಈ ಮೂಲಕ ತಾನು ಪ್ರತಿಪಾದಿಸ ಹೊರಟಿರುವ ಹಾದರಕ್ಕೆ ಉಂಟಾಗುವ ಕಂಟಕವನ್ನು ನಿವಾರಿಸಿದಂತೆಂಬ ತೃಪ್ತಿಭಾವವನ್ನು ಗ್ರಂಥಕರ್ತನು ತಾಳಿದ್ದಾನೆ. ಮೇಲಾಗಿ "ಮತದ ವ್ಯವಸ್ಥೆ ಮಾಡುವಾತನೊರ್ವನೆ. ಮೂರ್ಖ" ಎಂದು ವೀರಶೈವ ಧರ್ಮ ಸಂಸ್ಥಾಪಕರಾದ ಬಸವಣ್ಣನವರನ್ನು ಪರ್ಯಾಯದಿಂದ ಮೂರ್ಖನೆಂದು ಜರೆಯಲಾಗಿದೆ. ಇದು ಎಂತಹ ಹೇಯ ಹೀನ ಅಧಮಕಾರ್ಯ?

---

* ಈ ಸಂಬಂಧದಲ್ಲಿ ಚನ್ನಬಸವಣ್ಣನವರು ಹೇಳಿದ ಆಚಾರ "ಮನವ ನೋಯಿಸಿ ಮಾತನಾಡದಿಹುದೇ ಇಪ್ಪತ್ತೊಂಬತ್ತನೆಯ ಆಚಾರ"ವನ್ನು ಸ್ಮರಿಸಿಕೊಳ್ಳಬಹುದು.

## G6 ನೀಲಮ್ಮ

ಈ ತುಚ್ಛ ಅಧಮ ಗ್ರಂಥವಾದ ಮುಕ್ತಿ ಕಂಠಾಭರಣದಲ್ಲಿ ಮಹಾಮಾತೆ ಮಹಾಸತಿ ಮಹಾನುಭಾವಿಯಾದ ಬಸವಣ್ಣನವರ ಸತಿಯಾದ ನೀಲಮ್ಮ ನವರ ಶೀಲದ ಬಗ್ಗೆ ಶಂಕೆಯನ್ನು ಹುಟ್ಟಿಸಲಾಗಿದೆ. ಬಸವಣ್ಣನವರು ಕೂಡಲಸಂಗಮದಲ್ಲಿ ಐಕ್ಯವಾಗುವ ಮುನ್ನ ಹಡಪದ ಅಪ್ಪಣ್ಣನವರೊಂದಿಗೆ ಸಂಗಮಕ್ಕೆ ಬರಲು ಹೇಳಿಕಳಿಸಿದಾಗ ಪರಿಪೂರ್ಣ ಸತ್ಯವನ್ನು ಹೃದಯಂಗಮ ವಾಗಿ ಬಿಂಬಿಸುವ "....ಪರಿಣಾಮಮೂರ್ತಿ ಬಸವನ ರೂಪು ಎನ್ನ ಕರಸ್ಥಲ ದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇತಕಯ್ಯಾ ಬಸವಾ" ನುಡಿ ಯನ್ನು ಆಡಿದ ಮಹಾಮಾತೆಗೆ ಚಾರುಶೀಲೆಗೆ ಎಂತಹ ಕಳಂಕವನ್ನು ಅನಾಮಧೇಯ ಗ್ರಂಥಕರ್ತನು ಹಚ್ಚಿದ್ದಾನೆ! ಇದನ್ನು ವಿವರಿಸಿ ಹೇಳುವುದು ಉಚಿತವಲ್ಲ. ಆದರೆ ಹರಿಹರನ 'ಬಸವರಾಜದೇವರ ರಗಳೆ' ಗ್ರಂಥದಲ್ಲಿ ಬಂದಿರುವ ಜಂಗಮ ಪ್ರಸಂಗವನ್ನು ಇಲ್ಲಿ ಹೇಳಿರುವ ಕೃತಕ ವಚನ IV ೬೭, ೬೮, ೭೦, ೭೧, ೮೦, ೮೧, ೮೩, ೮೭, ೯೧, ೧೦೬ ಗಳೊಂದಿಗೆ ಆಲೋಚಿಸಿ ನೋಡಿದರೆ ಯಾವ ಸೂಜ್ಞರಿಗೂ ಅದು ಹೊಳೆಯದಿರದು.

## G7 ಮಾಚಿದೇವ

ಮುಕ್ತಿಕಂಠಾಭರಣ ಗ್ರಂಥದಲ್ಲಿ ಹೇಳಿರುವ ಒಂದೆರಡು ವಚನಗಳಿಂದ ಮಡಿವಾಳ ಮಾಚಿದೇವನ ವ್ಯಕ್ತಿತ್ವಕ್ಕೆ ಎಂತಹ ಕಲಂಕ ಹಚ್ಚಲಾಗಿದೆ ಎಂಬುದು ಕಂಡು ಬರುವುದು. ಅತ್ಯಂತ ಹೇಯವಾದ ವಚನ IV ೫೧ "ಪರಸ್ತ್ರೀಸಂಗ ....ಇಷ್ಟಲಿಂಗಸಿದ್ಧಿ"ವನ್ನು ಅನಾಮಧೇಯ ಗ್ರಂಥಕರ್ತನು ಪುಣ್ಯಾತ್ಮನಾದ ಮಡಿವಾಳ ಮಾಚಿದೇವನ ಬಾಯಿಂದ ನುಡಿಸಿದ್ದಾನೆ. ಅಲ್ಲದೆ ಬಸವಣ್ಣನನ್ನು ಜರೆಯುವ "ಬಸವಯ್ಯನಾಡಿದುದು ನಿಜವಲ್ಲ, ಆತ ತಳ ವಿಲ್ಲದ ಮಗಿಯು" ಹೇಳಿಕೆಯನ್ನು ಸಹ ಮಾಚಿದೇವನ ಬಾಯಿಂದ ನುಡಿಸ-ಲಾಗಿದೆ. ಇದೆಂತಹ ಕ್ರೂರ ಅಪಹಾಸ್ಯ. ಶರಣರ ಮೈ-ಮನಗಳೆರಡನು ನಿರ್ಮಲಗೊಳಿಸುವ ಪುಣ್ಯಕಾಯಕವನ್ನು ಕೈಕೊಂಡ ಮಹಾಮಹಿಮನಿಗೆ ಎಂತಹ ಕಲಂಕ ತಗಲಿಸಲಾಗಿದೆ. ಬಸವ ಪುರಾಣದಲ್ಲಿ ನಿರೂಪಿಸಿದಂತೆ

"ಬಸಗೆಯೂಯಿತೆನ್ನ ದಾಸಿಗೆಲಸಕೆ ಬದುಕಿದೆ ನಾನೆನುತ ತಾಂ ಅಸಮ ಜಂಗಮ ದರುಶನಾಪೇಕ್ಷತೆಯೊಳಿಯ್ದ್ಹಂದು" ಬಸವಣ್ಣನವರನ್ನು ಜಂಗಮ ಭಾವನೆಯಿಂದ ಬಗೆದಿರುವ ಮಾಚಿದೇವರನ್ನು ಗ್ರಂಥಕರ್ತನು ಅವರನ್ನು ಜರೆಯುವ ಹೀನಗೆಲಸಕ್ಕೆ ಹಚ್ಚಿದ್ದಾನೆ. ಮೇಲಾಗಿ ವಿಷಯಲಂಪಟರಿಗೆ ಉಪಯುಕ್ತವಾದ ಗಜಗ ಅಪು ಇಂಗ ಈ ಪದಾರ್ಥಗಳಿಂದ ನಿರ್ಮಿತ ಔಷಧಿ ಯನ್ನು ಮಾಚಿದೇವನಿಂದಲೇ ನುಡಿಸಲಾಗಿದೆ. ಇದೆಂತಹ ದುರ್ದೈವ. ಈ ರೀತಿಯಾಗಿ ಮಾಚಿದೇವನಿಗೆ ಕಲಂಕ ತಗಲಿಸುವ ವಚನಗಳೂ ಕೃತಕವಾಗಿವೆ.

## G8 ಪ್ರಭುದೇವ

ಮುಕ್ತಿಕಂಠಾಭರಣದ ಗ್ರಂಥಕರ್ತನು ಎಲ್ಲಕ್ಕಿಂತಲೂ ಮಿಗಿಲಾಗಿ ಪ್ರಭುದೇವನಿಗೆ ಕಲಂಕ ಹಚ್ಚಿದ್ದಾನೆ. ಪ್ರಭುದೇವನವೆಂದು ಹೇಳಲಾದ ೧೦೦ಕ್ಕೆ ೯೨ರಷ್ಟು ವಚನಗಳು ಕೃತಕವಾಗಿವೆ. ಆದುದರಿಂದ ವಚನಾಂಕಿತದಿಂದ ಅರಿಯಬಹುದಾದ ಪ್ರಭುದೇವನು ಬಹ್ವಂಶದಲ್ಲಿ ಹನ್ನೆರಡನೆಯ ಶತಮಾನದ ಪೂಜ್ಯ ಶರಣಮಣಿಯಲ್ಲ; ಆದರೆ ಗ್ರಂಥಕರ್ತನಿಂದ ಕಲ್ಪಿತವಾದ ಕೃತ್ರಿಮ ಪ್ರಭುದೇವ. ಮುಕ್ತಿಕಂಠಾಭರಣದಲ್ಲಿ 'ಗುಹೇಶ್ವರ' ಅಂಕಿತದಲ್ಲಿ ಹೇಳಿರುವ ೨೬೫ ವಚನಗಳಲ್ಲಿ ನಿಜವಾದವು ಕೇವಲ ೩೦ (ಪುನರಾವೃತ್ತವಾದ ೯ನ್ನು ಹೊರತುಪಡಿಸಿದರೆ ಕೇವಲ ೨೧) ಆಗಿವೆ; ಮಿಕ್ಕವು ಎಲ್ಲವೂ ಗ್ರಂಥಕರ್ತನಿಂದ ಸ್ವರಚಿತವಾಗಿವೆ, ಕೃತಕವಾಗಿವೆ. ನಿಜವಾದ ವಚನಗಳಲ್ಲಿ ದೋಷವೂ ಏನೂ ಇಲ್ಲ. ಆದರೆ ಕೃತಕವಾದ ವಚನಗಳಲ್ಲಿಯೇ ಆಕ್ಷೇಪಕರವಾದುದು ಹೇರಳ ವಾಗಿದೆ. ಆದುದರಿಂದ ಈ ಗ್ರಂಥದಲ್ಲಿ ಮುಖ್ಯವಾಗಿ ಪ್ರಕಟವಾಗಿರುವ ಪ್ರಭುದೇವನು ಕೃತ್ರಿಮ—ವಚನಾಂಕಿತದ ಮುಖವಾಡವನ್ನು ಧರಿಸಿದ—ಕಲ್ಪಿತ ಪ್ರಭುದೇವನಾಗಿದ್ದಾನೆ.

ಇಲ್ಲಿಯ ಕೃತ್ರಿಮ ವಚನಗಳಿಂದ ಚಿತ್ರಿತವಾಗಿರುವ ಪ್ರಭುದೇವನ ವ್ಯಕ್ತಿತ್ವವನ್ನು ನಿರೂಪಿಸುವ ಮೊದಲು ಹನ್ನೆರಡನೆಯ ಶತಮಾನದ ಪೂಜ್ಯನಾದ ಪ್ರಭುದೇವರನ್ನು ಕುರಿತು ಹೇಳುವುದು ಸೂಕ್ತವಾಗಿದೆ. ಈ ಬಗ್ಗೆ ನಾವು ಹೇಳುವ ಪ್ರಯಾಸಪಟ್ಟುಕೊಳ್ಳದೆ "ಅಲ್ಲಮ ವಚನ ಚಂದ್ರಿಕೆ" ಗ್ರಂಥ

ಸಂಪಾದಕರಾದ ಡಾ. ಎಲ್. ಬಸವರಾಜು ಅವರು ನುಡಿದುದನ್ನು (ಪೀಠಿಕೆ, ಪುಟ ೪೪) ಉದ್ಧರಿಸುವುದು ಸಮಂಜಸವಾಗಿದೆ.—"ಯಾವ ಸಂದರ್ಭದಲ್ಲೂ ಅವನು ಪರಮತ ಖಂಡನೆಯಾಗಲಿ ದ್ವೇಷವನ್ನಾಗಲಿ ಮಾಡದೆ ಕೇವಲ ತಾತ್ವಿಕ ವಿಚಾರಗಳನ್ನೇ ನಿಶಿತವಾದರೂ ಕೃಪಾರಸಸಿಕ್ತ ವಚನಧಾರೆಯಿಂದ ಅವರ ಭಾವ ಶರೀರಕ್ಕೆ ಧಾರೆಯೆರೆದು ಅವರನ್ನು ಮಹಾನುಭಾವರನ್ನಾಗಿ ಮಾಡಿದನು. ಪರಮತ ಖಂಡನೆಯನ್ನು ಮಾಡದೆ ಕೇವಲ ರಚನಾತ್ಮಕ ಮಾರ್ಗದಲ್ಲಿ ಜನತೆಯನ್ನು ಬಿಡುಗಡೆಯ ಕಡೆಗೆ ಕೊಂಡೊಯ್ದ ಈ ಮಹನೀಯ ನಂಥವರು ಕೇವಲ ವಚನಕಾರರಲ್ಲಿಯಷ್ಟೇ ಅಲ್ಲ, ಇಡೀ ಭಾರತದ ಧರ್ಮ ಚರಿತ್ರೆಯಲ್ಲಿ ಹಲವರಿಲ್ಲ".

ಇಂತಹದಕ್ಕೆ ಮತ್ತು 'ಶೂನ್ಯಸಂಪಾದನೆ' ಮತ್ತು 'ಪ್ರಭುಲಿಂಗಲೀಲೆ' ಗ್ರಂಥಗಳಲ್ಲಿ ಚಿತ್ರಿತವಾದ ಅಪ್ರತಿಮ ದಿವ್ಯ ಶರಣಮಣಿಗೆ ಪ್ರತಿಯಾಗಿ ಮುಕ್ತಿಕಂಠಾಭರಣದ ಗ್ರಂಥಕರ್ತನು ಘನವ್ಯಕ್ತಿಯಾದ ಪ್ರಭುದೇವರನ್ನು ಮೂಲೆಗೆ ತಳ್ಳಿ ಒಬ್ಬ ಕಾಲ್ಪನಿಕ ಪ್ರಭುದೇವನನ್ನು ವಚನಾಂಕಿತ ಲಾಂಛನದ ಮೂಲಕ ನಿರ್ಮಿಸಿದ್ದಾನೆ. ಅವನು ಬಸವನ ನಿಂದಕನಷ್ಟೇ ಅಲ್ಲದೆ ಬಸವ ದ್ವೇಷಿ. ಬಸವಣ್ಣನವರನ್ನು ಬಗೆ ಬಗೆಯಾಗಿ ಜರೆದು ದೂಷಿಸಿ ಅವರ ವ್ಯಕ್ತಿತ್ವ ಹನನವನ್ನಷ್ಟೇ ಅಲ್ಲದೆ ಅವರ ಘನವಾದ ಧರ್ಮಕಾರ್ಯದ ಹನನವನ್ನೂ ಮಾಡಿದ್ದಾನೆ. ಅಲ್ಲದೆ ಮಹಾಮಾತೆ ನೀಲಮ್ಮನವರಿಗೆ ಕಲಂಕ ಹಚ್ಚಿದ್ದಾನೆ. ಮೇಲಾಗಿ ಅವನೊಬ್ಬ ದುರಹಂಕಾರಿ, ಮಹಾಜಂಭಕ, ಮನೆಮುರುಕ, ವಿಷಯಾಸಕ್ತ, ವಿಷಯಲೋಲ, ದುರ್ಬೋಧಕ, ಪರರನ್ನು ಅಪಮಾರ್ಗಕ್ಕೆಳೆಯುವವ ಮತ್ತು ಹಾದರವನ್ನು ಎತ್ತಿಹಿಡಿಯುವ ಹಾದರಿಗನಾಗಿದ್ದಾನೆ. ಇಂತಹ ಕೃತ್ರಿಮ ಪ್ರಭುದೇವನನ್ನು ನಿರ್ಮಿಸುವ ಮೂಲಕ ಗ್ರಂಥಕರ್ತನು ಪ್ರಭುದೇವರಿಗೆ ಮಹಾ ಅಪಚಾರವನ್ನು ಮಾಡಿರುವನಲ್ಲದೆ ವೀರಶೈವ ಧರ್ಮದ ಅವಹೇಳನವನ್ನೂ ಮಾಡಿದ್ದಾನೆ.

———

# H ಮೌಲ್ಯಮಾಪನ

## H1 ವಿಮರ್ಶಾತ್ಮಕ ಲೇಖ

ಮುಕ್ತಿಕಂಠಾಭರಣದ ವಿಮರ್ಶಾತ್ಮಕ ಆರು ಲೇಖಗಳು ಬಳ್ಳಾರಿಯ ನವಸಂದೇಶ ಪತ್ರಿಕೆಯಲ್ಲಿ ಮೇ–ಜುಲೈ ೧೯೭೨ ಕಾಲಾವಧಿಯಲ್ಲಿ ಪ್ರಕಟವಾಗಿವೆ. ಅವುಗಳಲ್ಲಿ ಈ ಗ್ರಂಥದಲ್ಲಿಯ ಆಕ್ಷೇಪಣೀಯ ವಿಷಯ, ವಚನಗಳಲ್ಲಿ ಪಾದರಚನೆ, ವಿರಾಮಚಿನ್ಹಗಳು, ಎಂತಹದಾದರೂ ಒಂದು ಪ್ರಕಟಣೆ, ಪಾಠಶುದ್ಧೀಕರಣ, ವಿಷಯದ ಗತಿ ಇವುಗಳ ಕುರಿತು ಟೀಕೆ ಮಾಡಲಾಗಿದೆ. ಇದು ವಿಶ್ವವಿದ್ಯಾಲಯದ ಮೇಲಧಿಕಾರಿಗಳ ಗಮನಕ್ಕೆ ಬಂದಾಗ ಅವರಿಗೆ ತಿಳಿವಳಿಕೆ ನೀಡುವುದಕ್ಕಾಗಿ ಮುಕ್ತಿಕಂಠಾಭರಣದ ಸಂಪಾದಕರು ಅದಕ್ಕೆ ಸ್ಪಷ್ಟೀಕರಣವೆಂದು Cyclostyled ಪ್ರತಿಗಳನ್ನು ತಯಾರಿಸಿ ಮೇಲಧಿಕಾರಿಗಳಿಗೆ ಮತ್ತು ಅದರಲ್ಲಿ ಹಿತಾಸಕ್ತಿಯುಳ್ಳವರಿಗೆ ಹಂಚಿದರು; ಕೆಲವು ಸಮಯದ ನಂತರ ಈ ಸ್ಪಷ್ಟೀಕರಣವು ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಈ ಸ್ಪಷ್ಟೀಕರಣಕ್ಕೆ ಉತ್ತರ ರೂಪವಾಗಿ ನನ್ನ ಲೇಖ 'ಅಂಜನ'ವು ಅಚ್ಚಾಗಿ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ಮತ್ತು ಹಿತಾಸಕ್ತಿಯುಳ್ಳವರಿಗೆ ಹಂಚಲ್ಪಟ್ಟಿತು; ಅದು ಇದೇ ಗ್ರಂಥದಲ್ಲಿ ಪ್ರಕಟವಾಗಿದೆ. ಅದರಲ್ಲಿ ಸ್ಥೂಲವಾಗಿ ಹೇಳಿರುವುದನ್ನು ಇಲ್ಲಿ ಇನ್ನಷ್ಟು ಸ್ಪಷ್ಟವಾಗಿ ಹಾಗು ವಿಸ್ತಾರವಾಗಿ ವಿಶದಿಸಲಾಗಿದೆ.

## H2 ಸಂಪಾದನಾಕಾರ್ಯ

ಮುಕ್ತಿಕಂಠಾಭರಣ ಗ್ರಂಥದ ಸಂಪಾದಕರು ಸಂಪಾದನಾಕಾರ್ಯವನ್ನು ಎಳ್ಳಷ್ಟೂ ಮಾಡಿಲ್ಲ (ಪರಿಶಿಷ್ಟ II); ಏನಾದರೂ ಅದರಲ್ಲಿ ಕಂಡು ಬಂದರೆ ಅವು ಅವರ ಅಲಕ್ಷತೆ ಅದಕ್ಷತೆ ವಿಚಾರಹೀನತೆಗಳು; ಇವುಗಳ ನಿದರ್ಶನದಿಂದ ಅವರು ದೂಷಣೆಗೆ ಗುರಿಯಾಗಿದ್ದಾರೆ. ಆದಾಗ್ಯೂ ಅವರು ಪ್ರಸ್ತಾವನೆಯಲ್ಲಿ (ಪುಟ ೧೬) "ಗ್ರಂಥಸಂಸ್ಕರಣ ತತ್ವಗಳ ಮರ್ಯಾದೆಯಲ್ಲಿಯೇ ಇದರ ಪರಿಷ್ಕರಣ ಕಾರ್ಯವನ್ನು ಮಾಡಲಾಗಿದೆ. ಇಲ್ಲಿ ಬಂದ ವಚನಗಳು ಬೇರೆ ಕಡೆಗೆ

ಉಪಲಬ್ಧವಿದ್ದರೂ* ಆ ಆಕರಗಳನ್ನು ನೋಡಿ ಇವನ್ನು ಪರಿಷ್ಕರಣ ಮಾಡಲಾಗಿಲ್ಲ. ಈ ಆಕರದ ವಚನಗಳು ಇದ್ದಕಿದ್ದಂತೆಯೇ ಪ್ರಕಟವಾಗುವುದು ಆವಶ್ಯವಿದ್ದುದರಿಂದ ಹಾಗೆ ಮಾಡಲಾಗಿಲ್ಲ" ಎಂಬುದಾಗಿ ಹೇಳಿಕೊಂಡಿದ್ದಾರೆ. ಆದರೆ ಇದರಲ್ಲಿಯ ವಾಸ್ತವಿಕಾಂಶಗಳು ಇವರ ಹೇಳಿಕೆಯನ್ನು ಸಮರ್ಥಿಸುವುದಿಲ್ಲ. ಪ್ರತಿಯಾಗಿ ಪರಿಷ್ಕರಣ ಮಾಡಲಾಗಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದುದರಿಂದ ಸಂಪಾದಕರ ಈ ತರಹದ ಹೇಳಿಕೆಯು ವಾಡಿಕೆಯೆಂಬಂತಾಗಿದೆಯೇ ಹೊರತು ವಸ್ತುನಿಷ್ಠವಾಗಿಲ್ಲ. ಮತ್ತು ಬೇರೆ ಆಕರಗಳ ಆಧಾರದಿಂದ ಪರಿಷ್ಕರಣ ಮಾಡದಿರುವುದಕ್ಕೆ ಹೇಳಿದ ಕಾರಣಗಳು ಯೋಗ್ಯವಾಗಿಲ್ಲ. ತದ್ವಿರುದ್ಧವಾಗಿ ಕರ್ತವ್ಯಚ್ಯುತಿಯನ್ನು ನಿದರ್ಶಿಸುತ್ತವೆ.

## H3 ಆರೋಪಣೆ

ನವಸಂದೇಶ ಪತ್ರಿಕೆಯಲ್ಲಿ ಪ್ರಕಟವಾದ ೧ನೆಯ ಲೇಖದಲ್ಲಿ ಎತ್ತಿದ ಆರೋಪಣೆಗಳು ಇವು ಆಗಿವೆ.—(೧) ಬಸವಣ್ಣನವರನ್ನು ದುಷ್ಟ ಶಬ್ದಗಳಿಂದ ದೂಷಿಸಿರುವುದು (೨) ನೀಲಮ್ಮನವರ ಶೀಲವನ್ನು ಪ್ರಶ್ನಿಸಿರುವುದು (೩) ಕೆಲವು ವಚನಗಳಲ್ಲಿ ಕಂಡುಬರುವ ಹೇಯವು, ಅಶ್ಲೀಲವು (೪) ಸ್ತ್ರೀ-ಸಂಭೋಗವೇ ಲಿಂಗಾಂಗಸಮರಸವೆಂಬಂತೆ ಧ್ವನಿತವಾಗಿರುವುದು (೫) ಹಾದರವನ್ನು ಪ್ರತಿಪಾದಿಸಿ ಎತ್ತಿಹಿಡಿದಿರುವುದು. ಇವೆಲ್ಲವೂ 'ಆಚಾರ ಪ್ರಶಂಸೆ' ಪ್ರಕರಣದಲ್ಲಿ ಬಂದಿವೆ. ಇದರಲ್ಲಿ ಎತ್ತಿದ ಐದು ಪ್ರಶ್ನೆಗಳಲ್ಲಿ ಮೊದಲನೆಯದಾದ ಬಸವಣ್ಣನವರನ್ನು ದೂಷಿಸಿರುವುದಕ್ಕೆ (a) ಬಸವಣ್ಣನವರ ಘನತೆಯನ್ನು ಬಿತ್ತರಿಸುವ ವಚನಗಳು ಹೇರಳವಾಗಿವೆ ಎಂದುದಕ್ಕೆ ಈ

---

* ಮುಕ್ತಿ ಕಂಠಾಭರಣದ ಕೃತಿಚೌರ್ಯವನ್ನು ಮರೆಮಾಚುವ ಕುರಿತು ಈ ಬಗೆಯ ಸೋಗನ್ನು ಹಾಕಿಕೊಂಡಿದ್ದರೂ ಇರಬಹುದು. ಏಕೆಂದರೆ ಹೀಗೆ ಮಾಡಲು (ಪರಿಷ್ಕರಿಸಲು) ಪ್ರಯತ್ನಿಸಿದ್ದರೆ ಇಲ್ಲಿ ಬಂದಿರುವ ಅನೇಕ ವಚನಗಳು ಪ್ರಮಾಣಿತ ವಚನ ಸಂಗ್ರಹ ಗ್ರಂಥಗಳಲ್ಲಿ ದೊರಕುವುದಿಲ್ಲವಾದ್ದರಿಂದ ಇದು ಚೋರಕೃತಿಯೆಂದು ಸಿದ್ಧವಾಗುತ್ತಿತ್ತು. ಹೀಗೆ ಮಾಡದಿರುವುದು ಅಕ್ಷಮ್ಯವಾಗಿದೆ.

ಮೊದಲು ಚರ್ಚಿಸಿ ಅದು ಹಾಗಲ್ಲ— ಅಂದರೆ ಆ ವಚನಗಳು ಅಲ್ಲೊಂದು ಇಲ್ಲೊಂದು ಸಂದರ್ಭಸೂಚನೆಗಳಿಲ್ಲದೆ ಬಂದುವು ಹಾಗು ಗೌಣವಾದುವು ಆಗಿವೆ— ಅಂತಹ ಭಾವನೆಯು ಉದ್ಭವಿಸುವುದಿಲ್ಲ ಎಂದು ಸಿದ್ಧಮಾಡಲಾಗಿದೆ; (b) ಬಸವಣ್ಣನವರ ಅನುಭಾವ ಮತ್ತು ಭಕ್ತಿಯ ಕೊರತೆಯ ಬಗ್ಗೆ ಪ್ರಸ್ತಾಪಿಸಿರುವುದಕ್ಕೆ 'ಅಂಜನ' ಅಧ್ಯಾಯದಲ್ಲಿ ಖಂಡಿಸಲಾಗಿದೆ; (c) ಅಶ್ಲೀಲ ವಚನಗಳ ಬಗ್ಗೆ ಅಲ್ಲದ ಸಲ್ಲದ ಅರ್ಥ ಹಚ್ಚಲು ಹೆಣಗಿದ್ದಾರೆ. ಆದರೆ ಉಳಿದ ಪ್ರಶ್ನೆ— (ಅ) ನೀಲಮ್ಮನವರ ಶೀಲ, (ಬ) ಸಂಭೋಗವೇ ಸಮರಸವೆಂದಿರುವುದು (ಕ) ಪಾದರವನ್ನು ಪ್ರತಿಪಾದಿಸಿರುವುದು— ಇವುಗಳಿಗೆ ಇದೇ ಸ್ಪಷ್ಟೀಕರಣದಲ್ಲಿ ಸಂಪಾದಕರು ಏನೂ ಹೇಳಿಲ್ಲ. ಏಕೆಂದರೆ ಪ್ರತಿಯಾಗಿ ಹೇಳುವುದು ಸಾಧ್ಯವಿಲ್ಲ. ಆದುದರಿಂದ ಅವುಗಳ ಬಗ್ಗೆ ಮೌನವನ್ನು ತಾಳಿದ್ದಾರೆ.

## H31 ಸಮಾಧಾನ

ವಚನ IV ೩೨, ೩೩ ಗಳಲ್ಲಿ ಬಂದಿರುವ ಅಶ್ಲೀಲ ವಿಚಾರಕ್ಕೆ ಉಪಮಾ ಉಪಮೇಯುಗಳನ್ನು ತಿರುವು ಮುರುವು ಮಾಡಿ ಅವುಗಳು "ಶರಣ ಸತಿ ಲಿಂಗಪತಿ ಎಂಬ ಭಾವಕ್ಕೆ ಅನುಗುಣವಾಗಿ ಪ್ರಾಪಂಚಿಕ ಪ್ರತಿಮೆಗಳನ್ನು ಅಲ್ಲಲ್ಲಿ ಕೊಡುತ್ತಾರೆ" ಎಂದಿದ್ದಾರೆ. ಆದರೆ ಇದು ಸರಿಯಾದುದಲ್ಲ. ವಿಪರೀತವಾಗಿದೆ.

ವಚನ IV ೫೧ ರಲ್ಲಿ ಬಂದಿರುವ ಸ್ತ್ರೀಸಂಗಕ್ಕೆ ಅಲ್ಲದ ಸಲ್ಲದ ವಿಪರೀತವಾದ ಅರ್ಥ ಹಾಗು ಭಾವ ವಿವರಣೆಯನ್ನು ಹೇಳಿದ್ದಾರೆ. ಹೀಗೆ ಹೇಳುವಾಗ 'ಪರಸ್ತ್ರೀಸಂಗ' ಎಂಬ ಪದದಲ್ಲಿ ಇರುವ 'ಪರ' ಶಬ್ದಕ್ಕೆ ತನ್ನಿಂದನ್ಯವಾದ, ಮತ್ತು 'ಸಂಗ' ಶಬ್ದಕ್ಕೆ ವ್ಯಾಮೋಹ ಎಂಬ ಸಲ್ಲದ ಅರ್ಥ* ಹೇಳಿದ್ದಾರೆ. ತಾವೇ ವಿವರಿಸಿದಂತೆ 'ಶರಣಸತಿ ಲಿಂಗಪತಿ' ಎಂಬ ಭಾವನೆಯಲ್ಲಿ ಸಾಧಕನು ತಾನು ಸ್ತ್ರೀತ್ವವನ್ನು ಭಾವಿಸುತ್ತಾನೆಯೇ ಹೊರತು ಪುರುಷತ್ವವನ್ನಲ್ಲ.

* ಈ ಸಂಬಂಧದಲ್ಲಿ ಪರಿಚ್ಛೇದ F9 (ಪುಟ ೧೦೩) ನೋಡಬಹುದು.

ಅಂತೆಯೆ ಲಿಂಗವು ಪುರುಷ ( ಪತಿ ) ವೆಂದು ಭಾವಿಸಲಾಗುತ್ತಿದೆಯೇ ಹೊರತು ಸ್ತ್ರೀಯೆಂದಲ್ಲ. ಆದುದರಿಂದ ಹೀಗೆ ತಿರುವುಮುರುವು ಮಾಡಿ ಸಲ್ಲದ ಅಪಾರ್ಥವನ್ನು ಕಲ್ಪಿಸಿ ಅವುಗಳಿಗೆ ಅರ್ಥ ಹೇಳಿರುವುದು ಅಗ್ರಾಹ್ಯವಾಗಿದೆ (ಈ ಬಗ್ಗೆ ಅಂಜನ ಅಧ್ಯಾಯದಲ್ಲಿಯೂ ಬೇರೆ ಅಂಶಗಳಿಂದ ಇದನ್ನು ಖಂಡಿಸ ಲಾಗಿದೆ).

## H32 ಸ್ಪಷ್ಟಾರ್ಥ

ಈ ಬಗೆಯ ಅರ್ಥವಿವರಣೆಯನ್ನು ಆ ವಚನದ ಸೂಚ್ಯಾರ್ಥವೆಂದು ಹೇಳಲಾಗಿದೆ. ಆದರೆ ಗ್ರಂಥಕರ್ತನು ಇದರಲ್ಲಿ ಸೂಚ್ಯಾರ್ಥವನ್ನು ಕಲ್ಪಿಸಿರದೆ ಸ್ಪಷ್ಟಾರ್ಥವನ್ನೇ ನಿದರ್ಶಿಸಿದ್ದಾನೆ. ಒಂದು ವೇಳೆ ಅದರಲ್ಲಿ ಸೂಚ್ಯಾರ್ಥವಿದ್ದರೆ ಉಳಿದೆಡೆಯಲ್ಲಿ ಟೀಕೆ, ತಾತ್ಪರ್ಯಗಳಿಂದ ವಚನೆಗಳ ಅರ್ಥ ವಿವರಿಸಿದಂತೆ (೨೪ ವಚನಗಳಿಗೆ ಟೀಕೆ ಹಾಗು ೪ ವಚನಗಳಿಗೆ ತಾತ್ಪರ್ಯಗಳನ್ನು ಹೇಳ ಲಾಗಿದೆ) ಇಲ್ಲಿಯೂ ಅದನ್ನು ಟೀಕೆ ತಾತ್ಪರ್ಯ ಮುಂತಾದವುಗಳಿಂದ ಸ್ಪಷ್ಟೀ-ಕರಿಸುತ್ತಿದ್ದನು. ಮೇಲಾಗಿ ಈ ವಚನವು ಭಾವಸೂಚಕವಾಗಿರದೆ ಪ್ರಥಮ ವಾಕ್ಯವು ಕ್ರಿಯೆಯನ್ನು ಹೇಳುತ್ತದೆ. ಇದಕ್ಕಿಂತ ಪೂರ್ವದ ವಚನ ೫೦ ದಲ್ಲಿ, ಮುಂದಿನ ವಚನ ೫೧ ಕ್ಕೆ ಪೀಠಿಕೆಯೆಂಬಂತೆ, ಜಪ ಅರಿವು ಭ್ರಾಂತಿಗಳನ್ನು ಜರೆದು ಮನದಿಷ್ಟ ಪೂರ್ಣವಾಗುವುದಕ್ಕೆ ಕ್ರಿಯೆಯು ಅವಶ್ಯವೆಂದು ಹೇಳ ಲಾಗಿದೆ. ಅಂತೆಯೆ ವಚನ ೫೧ ದಲ್ಲಿ "ಜಾಗ್ರತಿಯಲ್ಲಿ ಪರಸ್ತ್ರೀಸಂಗ ಪಾವಕ ಶೀತಲದಂತಾದಡೆ ಇಷ್ಟಲಿಂಗಸಿದ್ಧಿ" ಎಂದುದು ದೇಹೇಂದ್ರಿಯ ವ್ಯಾಪಾರ ವನ್ನು ಮತ್ತು ಅದರಿಂದೊದಗುವ 'ಮನದಿಷ್ಟಪೂರ್ಣ'ವನ್ನು ಹೇಳಿ ಆ ಮೂಲಕ ಸ್ವಪ್ನದಲ್ಲಿ ಹಾಗು ಸುಷುಪ್ತಿಯಲ್ಲಿ ಉಂಟಾಗುವ ಪರಿಣಾಮವನ್ನು ಸೂಚಿಸುತ್ತದೆ. ಸಂದರ್ಭೋಚಿತವಾಗಿ ಗಮನಿಸಿದರೆ 'ಇಷ್ಟಲಿಂಗಸಿದ್ಧಿ' ಎಂಬುದು 'ಮನದಿಷ್ಟಕ್ರಿಯಾಸಿದ್ಧಿ' ಎಂದು ಸೂಚಿತವಾಗುತ್ತದೆ. ಮತ್ತು ನಂತರದ ವಚನ ೫೩ ದಲ್ಲಿ ನುಡಿದಿರುವ 'ಶಾಂಭವಕೃತ್ಯ' ಎಂಬುದರ ಮೂಲ ಕವೂ ಇದನ್ನೇ ಬಿಂಬಿಸುತ್ತದೆ. ಆದುದರಿಂದ ಸಂಪಾದಕರು ಸ್ಪಷ್ಟೀಕರಣದಲ್ಲಿ ವಿವರಿಸಿದ ಸೂಚ್ಯಾರ್ಥವು ಯಾವ ರೀತಿಯಿಂದಲೂ ಎಳ್ಳಷ್ಟೂ ಗ್ರಾಹ್ಯವಾಗಿಲ್ಲ.

## H4 ಗ್ರಂಥಕರ್ತೃ

ಮುಕ್ತಿಕಂಠಾಭರಣ ಗ್ರಂಥದ ಪ್ರಸ್ತಾವನೆ (ಪುಟ ೪) ಯಲ್ಲಿ ಗ್ರಂಥ ಕರ್ತನ ಬಗೆಗೆ ಯಾವ ವಿಷಯಗಳನ್ನು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ ವೆಂದಿದ್ದಾರೆ. ಆದರೆ ವಿಮರ್ಶೆಯ ಲೇಖಗಳಲ್ಲಿ ಮಾಡಿದ ಟೀಕೆಗಳಿಗೆ ಉತ್ತರ ರೂಪವಾಗಿ ನಂತರ ಸಂಪಾದಕರು ತಾವು ಹೊರಡಿಸಿದ ಸ್ಪಷ್ಟೀಕರಣದಲ್ಲಿ ಅದರ ಕರ್ತೃ ಸಿದ್ಧವೀರದೇವನೆಂದು ಅವನು ಆರು ಕನ್ನಡ ಒಂದು ಸಂಸ್ಕೃತ ಗ್ರಂಥಗಳ ಕರ್ತೃವೆಂದು ಹೇಳಿ ತಮ್ಮ ಸಂಪಾದನಾ ಹಾಗು ಪ್ರಕಟನಾ ಕಾರ್ಯವನ್ನು ಸಮರ್ಥಿಸ ಹೊರಟಿದ್ದಾರೆ. ಆದರೆ ಇದು ತೀರ ದುಃಸಾಹಸವಾಗಿದೆ, ಹಾಗು ಅರಿಯದವರನ್ನು ಮರುಳುಗೊಳಿಸುವ ಕುಚೋದ್ಯವಾಗಿದೆ. ಹೇಗಂದರೆ—

ವಚನ IV ೪೬೨ ರ ಕೆಳಗೆ ಕೊಟ್ಟಿರುವ ಟೀಕಿನಲ್ಲಿ 'ಸಿದ್ಧವೀರಸ್ವಾಮಿ'ಯ ಉಲ್ಲೇಖವಿರುತ್ತದೆ; ಮತ್ತು ವಚನ ೪೯೫ಕ್ಕೆ ಶೀರ್ಷಿಕೆಯಲ್ಲಿ ಹೇಳಿದ ಪ್ರಕಾರ ಅದರ ಕರ್ತೃ 'ಸಿದ್ಧವೀರದೇಶಿಕೇಂದ್ರ' ಎಂದಿದೆ. ಅನಂತರ ಡಾ. ಆರ್. ನರಸಿಂಹಾಚಾರರಿಂದ ರಚಿತವಾದ ಕರ್ನಾಟಕ ಕವಿ ಚರಿತೆ (1929, ಪುಟ ೩೬೧) ಸಂಪುಟ ೩ರಲ್ಲಿ 'ಸಿದ್ಧವೀರದೇವ'ನೆಂಬ ವಚನಕಾರ ಹಾಗು ಅವನ ಅಂಕಿತ 'ತೋಂಟದ ಸಿದ್ಧಲಿಂಗದೇವ'* ಎಂದು ಹೇಳಲಾಗಿದೆ. ಸಿದ್ಧವೀರದೇವ ನೆಂಬ ಹೆಸರು ದೊರಕಿದ್ದೇ ತಡ ಸಂಪಾದಕರು ಮತ್ತೆ ತಮ್ಮ ವಿಶ್ವಾಮಿತ್ರ ಸೃಷ್ಟಿ ಯನ್ನು ಕಲ್ಪಿಸಲು ಹೊರಟರು. ಇದನ್ನು ವಿಸ್ತರಿಸುವುದಕ್ಕೆ ಮತ್ತೆ ಕವಿಚರಿತೆ ಶೋಧಿಸಿದರು. ಅದರಲ್ಲಿ (ಸಂಪುಟ ೨ ಪುಟ ೩೨೪ ರಲ್ಲಿ) 'ಸಂಪಾದನೆಯ ಸಿದ್ಧ-ವೀರಣಾಚಾರ್ಯ' ಎಂಬ ವಚನಕಾರನ ಹೆಸರು ದೊರಕಿತು. ಅದಕ್ಕೆ Eureka Eureka ಎಂದು ಅರಚಿಕೊಂಡು ಅದು ಅನುಕೂಲಸಿಂಧುವೆಂದು ಪರಿಗಣಿಸಿ ವ್ಯಾಕರಣದಲ್ಲಿ ಸಂಧಿ ಮಾಡುವಾಗ ಒದಗುವ ಪ್ರಕ್ರಿಯೆ—ಲೋಪ, ಆಗಮ,

---

* ಕರ್ನಾಟಕ ಕವಿಚರಿತೆಕಾರರು ಸಿದ್ಧವೀರದೇವನ ವಚನಾಂಕಿತವು ತೋಂಟದ ಸಿದ್ಧಲಿಂಗದೇವ ಎಂದು ಹೇಳಿರುವುದನ್ನು ಅನುಕೂಲಸಿಂಧುವಾಗುವಂತೆ ತೋಂಟದ ಸಿದ್ಧಲಿಂಗೇಶ್ವರ ಎಂಬುದಾಗಿ ಪರಿವರ್ತಿಸಿಕೊಂಡುದನ್ನು ಪರಿಚ್ಛೇದ C1-3 ದಲ್ಲಿ ನೋಡಬಹುದು.

ಆದೇಶ-ಗಳೆಲ್ಲವನ್ನೂ ಬಳಸಿ ಅಂದರೆ ಮೊದಲನೆಯ ಪದವಾದ 'ಸಂಪಾದನೆಯ' ಎಂಬುದನ್ನು ಲೋಪಮಾಡಿ, 'ಸಿದ್ಧವೀರಣಾಚಾರ್ಯ' ನೆಂಬುದಕ್ಕೆ ಆಗಮ ಆದೇಶಗಳನ್ನು ಪ್ರಕ್ರಿಯಿಸಿ ಅದನ್ನು 'ಸಿದ್ಧವೀರದೇವ' ನೆಂದು ಮಾಡಿದ್ದಾರೆ. ಅಲ್ಲದೆ ಕವಿಚರಿತೆಕಾರರು ಸಂಪಾದನೆಯ ಸಿದ್ಧವೀರಣಾಚಾರ್ಯನಿಂದ ರಚಿತ ವಾದವೆಂದು ಹೇಳಲಾದ (ಐದು ಕನ್ನಡ, ಒಂದು ಸಂಸ್ಕೃತ) ಆರು ಕೃತಿಗಳಿಗೆ ತಮ್ಮದೊಂದನ್ನು, ಮುಕ್ತಿಕಂಠಾಭರಣವನ್ನು, ಸೇರಿಸುವ ಅಧಿಕ ಪ್ರಸಂಗವನ್ನು ಮಾಡಿದ್ದಾರೆ; ಮತ್ತು 'ಪಾದಸ್ತೋತ್ರ', ಮುಕ್ತಿಕಂಠಾಭರಣ ಈ "ಎರಡು ಕೃತಿಗಳು ಇದುವರೆಗೆ ಉಪಲಬ್ಧ [ಕವಿಚರಿತೆಕಾರರು 'ಪಾದಸ್ತೋತ್ರ' ಎಂಬುದೊಂದೇ ಸಿಕ್ಕಿಲ್ಲ ಎಂದು ಹೇಳಿದ್ದಾರೆ] ವಾಗಿರಲಿಲ್ಲ. ಇದೀಗ 'ಮುಕ್ತಿಕಂಠಾಭರಣ'ವು ಅಪೂರ್ಣರೂಪದಲ್ಲಿ ದೊರೆತಿದೆ" ಎಂದು ಹೇಳುವ ಧಾರ್ಷ್ಟ್ಯವನ್ನು ಧೂರ್ತತನವನ್ನು ತೋರಿದ್ದಾರೆ. ಇದು ಜಾದುಗಾರನು ಹಾವನ್ನು ಮುಂಗಲಿಯಾಗಿ ಮತ್ತೆ ಅದನ್ನು ಮೊಲವನ್ನಾಗಿ ಮಾಡಿ ತೋರಿಸುವ ಇಂದ್ರಜಾಲದಂತಿದೆ. ಅಥವಾ 'ಎಳೆ ಸಿಕ್ಕಿದರೆ ಸೀಳು ನುಂಗುವವ' ಎಂಬ ಗಾದೆಯ ಮಾತಿಗೆ ಇದು ಯಥಾರ್ಥ ಉದಾಹರಣೆಯಾಗಿದೆ. ಈ ಚಮತ್ಕೃತಿಯನ್ನು ಗಣಿತಶಾಸ್ತ್ರದ ರೀತಿಯಲ್ಲಿ ವಿವರಿಸಬೇಕಾದರೆ ಹೀಗಾಗುತ್ತದೆ.— ಸಿದ್ಧವೀರಸ್ವಾಮಿ = ಸಿದ್ಧವೀರದೇಶಿಕೇಂದ್ರ=ಸಿದ್ಧವೀರದೇವ=ಸಂಪಾದನೆಯ ಸಿದ್ಧವೀರಣಾಚಾರ್ಯ (author of 6 works)⟶×ಸಿದ್ಧವೀರಣಾಚಾರ್ಯ⟶ ಸಿದ್ಧವೀರಾಚಾರ್ಯ⟶ ಸಿದ್ಧವೀರದೇವ (author of six works) + ಮುಕ್ತಿಕಂಠಾಭರಣ=ಗುರುಪ್ರಶಂಸಾ ಮುಕ್ತಿಕಂಠಾಭರಣ ("ಸಿದ್ಧರಾಮೇಶ್ವರ ವಚನಗಳು" ಪುಸ್ತಕ ನೋಡಿರಿ) = ಮುಕ್ತಿಕಂಠಾಭರಣ. ಈ ರೀತಿಯಾಗಿ ಎಳೆದು ಹೇಳುವ, ಅಧಿಕ ಪ್ರಸಂಗಮಾಡುವ ಮತ್ತು ಅಸತ್ಯವನ್ನು ಕಲ್ಪಿಸುವ ಕಾರ್ಯವು ವಿಶ್ವವಿದ್ಯಾಲಯದ ಪ್ರಾಧ್ಯಾಪಕರಿಗೆ ಹಾಗೂ ಸಾಹಿತ್ಯ ಶೀಲಕ್ಕೆ ಅನುಚಿತವಾಗಿದೆ.

## H5 ಮಹತ್ವ

ಈ ಗ್ರಂಥದಲ್ಲಿ ಹೇಳಿಕೊಳ್ಳುವುದು ಏನಾದರೂ ಇದ್ದರೆ ಅದು ಗುರು (ಶಿಷ್ಯ) ಭಕ್ತ ಇವರ ಪರಸ್ಪರ ಭೇದ, ಸಂಬಂಧ ಇವುಗಳನ್ನು ಚರ್ಚಿಸಿ ಅವ

ರಲ್ಲಿ ಪರಸ್ಪರ ಸಮಾನತೆ ಹೇಳಲಾಗಿದೆ. ಅಲ್ಲದೆ ಲಿಂಗದ ಬಗ್ಗೆಯೂ ಕೆಲವು ವಿಚಾರಗಳನ್ನು ಹೇಳಲಾಗಿದೆ (ಇವೆರಡರ ಕುರಿತು ಸಂಪಾದಕರು ಸ್ವಲ್ಪದರಲ್ಲಿ ಸ್ಪಷ್ಟೀಕರಣದಲ್ಲಿ ಹೇಳಿದ್ದಾರೆ). ಆದರೆ ಇವುಗಳನ್ನು ಶೂನ್ಯಸಂಪಾದನೆ ಗ್ರಂಥದಲ್ಲಿ ಅಜಗಣ್ಣ–ಮುಕ್ತಾಯಕ್ಕರ ಉಪದೇಶದಲ್ಲಿ ಪ್ರತಿಪಾದಿಸಿದ ಗುರು-ಶಿಷ್ಯಸಮಾನತ್ವಕ್ಕೆ ಹೋಲಿಸಿ ನೋಡಿದರೆ ಮುಕ್ತಿಕಂಠಾಭರಣದಲ್ಲಿ ಪ್ರತಿಪಾದಿತವಾದುದು ಗೌಣವಾದುದು ಎಂದು ಕಂಡುಬರುತ್ತದೆ. ಅದರಂತೆಯೇ 'ಲಿಂಗ' ವಿಚಾರದಲ್ಲಿಯೂ ಶೂನ್ಯಸಂಪಾದನೆಯಲ್ಲಿ, ಸಿದ್ಧರಾಮನ ಲಿಂಗ ಧಾರಣ ಪ್ರಸಂಗದಲ್ಲಿ, ಬೋಧಿಸಿದುದನ್ನು ಮುಕ್ತಿಕಂಠಾಭರಣದಲ್ಲಿ ಹೇಳಿದು ದಕ್ಕೆ ತುಲನೆ ಮಾಡಿ ನೋಡಿದರೆ ಎರಡನೆಯದು ಸಾಧಾರಣ ತರಗತಿಯ ದಾಗಿದೆಯೆಂದು ಕಂಡುಬರುವುದು. ಆದುದರಿಂದಲೇ ಸಂಪಾದಕರು ಇವುಗಳ ಬಗ್ಗೆ ಪ್ರಸ್ತಾವನೆಯಲ್ಲಿ ಏನೂ ಹೇಳಿಲ್ಲ. ಅಲ್ಲದೆ, ಲಿಂಗದ ಕುರಿತು ದುರ್ಬುದ್ಧಿ ಯಿಂದ ದುಷ್ಟವಿಚಾರವನ್ನು ಸೇರಿಸಲಾಗಿದೆ. ವೀರಶೈವರಿಗೆ ಲಿಂಗವೆಂದರೆ 'ಇಷ್ಟಲಿಂಗ'. ಆದರೆ ಗ್ರಂಥಕರ್ತನು ಲಿಂಗಕ್ಕೆ ವ್ಯಾಕರಣದಲ್ಲಿ ಹೇಳುವ ಜನನೇಂದ್ರಿಯ ಸೂಚಕವಾಗಿರುವ ಅರ್ಥವನ್ನೂ ಸಹ ಅಳವಡಿಸಿದ್ದಾನೆ. ಮತ್ತು ಲಿಂಗಾಂಗ ಸಮರಸವನ್ನು ಪಲ್ಲಟಗೊಳಿಸಿ ಅಂಗಲಿಂಗ ಸಮರಸ ವೆಂದು— ಅಂದರೆ ಸಂಭೋಗವೆಂದು ಕೆಲವೆಡೆಯಲ್ಲಿ ಸೂಚಿಸಿದ್ದಾನೆ. ಇದು ಕುತ್ಸಿತವಾಗಿದೆ ಹೇಯವಾಗಿದೆ; ಅಂತೆಯೇ ಖಂಡನೀಯವಾಗಿದೆ.

ಆದರೆ ಯಾವ ವಚನಕಾರರು ಮತ್ತು ಗ್ರಂಥಕಾರರು ಗುರುಪಾದೋದಕದ ಬಗ್ಗೆ ಅಷ್ಟೊಂದು ವಿಸ್ತಾರವಾಗಿ ಮಹತ್ವಪೂರ್ಣವಾಗಿ ಹೇಳದೆ ಇರುವು-ದನ್ನು ಮುಕ್ತಿಕಂಠಾಭರಣದ ಗ್ರಂಥಕರ್ತನು ಬಹಳ ವಿಸ್ತಾರವಾಗಿ ೯೫ ವಚನ ಗಳಲ್ಲಿ ಹೇಳಹೊರಟಿದ್ದಾನೆ. ಬಹುಶಃ ಹೀಗೆ ಹೇಳಿರುವುದು ತಾನೊಬ್ಬ ಜಗದ್ಗುರುವೆಂದೆನಿಸಿಕೊಳ್ಳಬೇಕು, ಪ್ರಸಿದ್ಧಿಹೊಂದಬೇಕು, ಅನೇಕರು –ಸ್ತ್ರೀ-ಯರು ಮುಂತಾಗಿ— ತನ್ನ ಪಾದಪೂಜೆಗೆ ಹಾತೊರೆಯಬೇಕು ಎಂಬ ಮನ-ದಿಷ್ಟದ, ಬಯಕೆಯ ನಿದರ್ಶನವಾಗಿದೆಯೆನ್ನಬಹುದು. ಆದರೆ ಈ ೯೫ ವಚನ ಗಳಲ್ಲಿ ಗುರುಪಾದೋದಕದ ಕುರಿತು ಹೇಳಿರುವುದು ಅತ್ಯಲ್ಪ, ಮತ್ತು ಅದರಲ್ಲಿ

ವಿಶೇಷವೇನೂ ಇರುವುದಿಲ್ಲ. ಪ್ರತಿಯಾಗಿ ಆಕ್ಷೇಪಕಾರಕವಾದದ್ದು ಅಶ್ಲೀಲವಾದದ್ದು ಹೇಯುವಾದದ್ದು* ನಿಷಿದ್ಧವಾದದ್ದು ಇಲ್ಲಿಯೇ ಬೀಜಾರೋಪಣವಾಗಿದೆ, ಜನಿಸಿದೆ.

## H6 ನಿಷ್ಕರ್ಷೆ

ಕೊನೆಯದಾದ 'ಆಚಾರ ಪ್ರಶಂಸೆಯು' ವಿಸ್ತಾರದಲ್ಲಿ ಎಲ್ಲಕ್ಕಿಂತಲೂ ಮಿಗಿಲಾಗಿ ವಚನಗಳನ್ನೊಳಗೊಂಡು ಗ್ರಂಥದ ಮೂರು ನಾಲ್ಕಾಂಶ ಭಾಗವನ್ನು ಆಕ್ರಮಿಸಿದೆ. ಇದರ ಕುರಿತು ಸಂದರ್ಭಾನುಸಾರವಾಗಿ ಅಲ್ಲಲ್ಲಿ ಪ್ರಸ್ತಾಪಿಸಲಾಗಿದೆ. ಅದರಲ್ಲಿಯ ದುಷ್ಟ ಹಾಗು ನಿಷಿದ್ಧ ಆಚಾರವಿಚಾರಗಳನ್ನು ದೌರ್ಜನ್ಯವನ್ನು ಇಲ್ಲಿ ಎತ್ತಿ ತೋರಿಸಲಾಗಿದೆ. ಹೀಗಿದ್ದಾಗ್ಯೂ ಮುಕ್ತಿಕಂಠಾಭರಣ ಗ್ರಂಥದ ಸಂಪಾದಕರು ಇದನ್ನು ಕುರಿತು ಪ್ರಸ್ತಾವನೆ (ಪುಟ ೧೪) ಯಲ್ಲಿ "ಮುಕ್ತಿಕಂಠಾಭರಣ ವೀರಶೈವ ಧರ್ಮತತ್ವಗಳ ನಿಷ್ಕರ್ಷೆ ನಿರ್ಣಯ ದೃಷ್ಟಿಯಿಂದ ಬಹು ಮಹತ್ವವಾದ ಗ್ರಂಥ.... ಇಲ್ಲಿ ಉದ್ಧೃತವಾಗಿರುವ ೩೦೦ ವಚನಗಳು ಅನುಭವದ ಕಣಿ ಆಧ್ಯಾತ್ಮದ ಆಗರ ತತ್ವದ ಶಿಖಾಮಣಿ ಸಾಹಿತ್ಯದ ಸುಧೆ ಆಗಿವೆ" ಎಂದಿದ್ದಾರೆ. ಆದರೆ ಈ ಬಗೆಯ ಹೇಳಿಕೆಗಳು ವಾಸ್ತವಿಕವಾಗಿರದೆ ವಸ್ತುನಿಷ್ಠವಾಗಿರದೆ ಯಥಾರ್ಥವಾಗಿರದೆ ಕೇವಲ ಪ್ರಶಂಸಾಪರವಾಗಿ ಉತ್ಪ್ರೇಕ್ಷೆಯಿಂದ ನುಡಿದುವು ಆಗಿವೆ ಮತ್ತು ವಿಪರೀತವಾಗಿವೆ ಎಂಬುದು ಮೇಲೆ ವಿವರಿಸಿದ ಅಂಶಗಳಿಂದ ಸ್ಪಷ್ಟವಾಗುವುದು. ಸಂಪಾದಕರ ಇಂತಹ ಹೇಳಿಕೆಯಿಂದ ಗ್ರಂಥದಲ್ಲಿ ಸಂಭೋಗವೆ ಸಮರಸವೆಂದು ಧ್ವನಿತವಾಗಿರುವುದು, 'ಹಾದರವಾಡಿ ಹರನನರ್ಚಿಸಿದಡೆ ದೋಷವಿಲ್ಲೆಂಬುದು' ಸ್ಪಷ್ಟವಾಗಿ ಉಲ್ಲೇಖಿತವಾಗಿರುವುದು ಇವುಗಳೇ ವೀರಶೈವ ಧರ್ಮತತ್ವಗಳ ನಿಷ್ಕರ್ಷೆ ನಿರ್ಣಯಗಳೆಂದು ಹೇಳಬಹುದೊ? ಹಾಗಾದರೆ ವೀರಶೈವಕ್ಕೆ ಇದರಂತಹ ಅಪಮಾನ ಬೇರೊಂದಿರಲಾರದು.

---

* ಪರಿಚ್ಛೇದ F4 (ಪುಟ ೮೯) ನೋಡಿರಿ.

## H17 ಸುಧೆ

ಸಂಪಾದಕರು ಮುಕ್ತಿಕಂಠಾಭರಣ ಗ್ರಂಥವ ಲಕ್ಷಣವೊಂದನ್ನು 'ಸಾಹಿತ್ಯದ ಸುಧೆ' ಎಂದು ಹೇಳಿರುವುದನ್ನು ಸ್ವಲ್ಪ ವಿವರವಾಗಿ ಆಲೋಚಿಸುವುದು ಸೂಕ್ತವಾಗಿದೆ. ಈ ಕುರಿತು ನಾವು ಸಾಹಿತ್ಯದ ಎರಡು— ಉಪಮೆ, ಅರ್ಥ ಗೌರವ—ಲಕ್ಷಣಗಳ ಮಾನದಿಂದ ಅಳೆದು ನೋಡುವುದು ಸಮಂಜಸವಾಗಿದೆ.

## H71 ಉಪಮೆ

ಧರ್ಮತತ್ವಗಳ ಪ್ರತಿಪಾದನೆಯ ಗ್ರಂಥದಲ್ಲಿ ಬಳಸಿದ ಉಪಮೆಗಳು ಸಾಧುವಾಗಿರಬೇಕು, ಶೀಲವುಳ್ಳವುಗಳಾಗಿರಬೇಕು, ಅಲ್ಲದೆ ಔಚಿತ್ಯಪೂರ್ಣ ವಾಗಿರಬೇಕು. ಈ ದೃಷ್ಟಿಯಿಂದ ಆಚಾರ ಪ್ರಶಂಸೆ ಪ್ರಕರಣದಲ್ಲಿಯ ಉಪಮೆ ಗಳನ್ನು ಮಾದರಿಗಾಗಿ ಒರೆದು ನೋಡುವುದು ಯುಕ್ತವಾಗಿದೆ.

ವಚನ ೧೫ ರಲ್ಲಿ ಬಸವಣ್ಣನ ವಚನ 'ಆರೆಭಕ್ತರಾದವರ ನೆರೆ ಬೇಡ ಹೊರೆ ಬೇಡ' ಮುಂತಾಗಿ ನುಡಿದುದಾಗಿದೆ. ಇದರ ಪರಿಣಾಮವನ್ನು ಮುಂದಿನ ವಚನ ೧೬ ರಲ್ಲಿ 'ಆರ್ಯರ ವಚನಕ್ಕೆ ಅಷ್ಟಾವರಣವ ಸಂಗನ ಬಸವಯ್ಯನ ವಚನವ ಕೇಳಿ ಪದ್ಮಿನಿಯಲ್ಲಿ ಬೆರಗಾದ ಕಾಮಿಯಂತೆ.... ಪರವಶ ನಾನಾದೆ' ಎಂದು ವರ್ಣಿಸಲಾಗಿದೆ; ಮುಂದಿನ ವಚನ ೧೭ ರಲ್ಲಿ "ಛತ್ರಪತಿಯ ಆತುರ ವನದ ನಾರಿಗೆ [ದುಷ್ಯಂತ ಶಕುಂತಲೆಯರ ಪ್ರೇಮ ಪ್ರಸಂಗ ಸೂಚಿಸುತ್ತದೆ] ಕಲ್ಪವೃಕ್ಷವಾದಂತಾಯಿತ್ತೆನಗೆ" ಎಂದು ಉಪಮಿಸಲಾಗಿದೆ. ಇವಲ್ಲದೆ ವಚನ ೩೯ ರಲ್ಲಿ "ನಾಗರ ಮೈಥುನದಂತಪ್ಪ ಶಿವಯೋಗದ ಶಿವ-ಲಿಂಗಸಮರಸಭಾವದಲ್ಲಿ" ಎಂದು ನುಡಿದು ವೀರಶೈವರ ಆಧ್ಯಾತ್ಮ ಸಾಧನೆಯಲ್ಲಿ ಉಪಾಂತ್ಯವಾದ ಶರಣ ಮೆಟ್ಟಿಲಿನ ಸಮರಸಭಕ್ತಿಯನ್ನು ಜಂತುಗಳ ಪ್ರಜೋತ್ಪತ್ತಿ ಕ್ರೀಡೆಗೆ ಹೋಲಿಸಲಾಗಿದೆ. ಇದಲ್ಲದೆ ವಚನ ೪೧೬ ದಲ್ಲಿ "ಶಿವಯೋಗಸಾಧಿಪ ಶಕ್ತಿ ಶ್ವಾನರತಿಯಂತಾಗಬಾರದು" ಎಂಬುದರಲ್ಲಿ ಅತ್ಯಂತ ನೀಚ ಉಪಮೆಯನ್ನು ಹೇಳಲಾಗಿದೆ. ಮೇಲಾಗಿ ವಚನ (ಪು ೩೮, ವ. ೧೪) ದಲ್ಲಿ ಉಕ್ತವಾಗಿರುವುದು "ಹೇಳಿದ ಬೋಧೆ ವಿಧವೆಯ ಯೌವನ

ದಂತಾಗಬಾರದು" ಕಾಮುಕ ಗ್ರಂಥಕರ್ತನ ಅಂತರಂಗ ದರ್ಶನವನ್ನು ನೀಡುತ್ತದೆ.

ಇದೇ ಜಾಡಿನಲ್ಲಿ ಮುಂದುವರೆದು ವಚನ ೩೨ರಲ್ಲಿ ಪುರುಷನ ಸಂಭೋಗ ಕ್ರಿಯೆಯನ್ನು ಅಂಗಚೇಷ್ಟೆಯನ್ನು ಲಿಂಗಾಂಗ ಸಾಮರಸ್ಯಕ್ಕೆ ಹೋಲಿಸಲಾಗಿದೆ. ಇದರಂತೆಯೇ ವಚನ ೩೩ ರಲ್ಲಿಯೂ ಸಹ. ಇಂಥ ಉಪಮೆಗಳಿಗೆ ಶಿಖಾಮಣಿಯಂತಾಗಿ ವಚನ ೫೧ ರಲ್ಲಿ ಇಷ್ಟ ಪ್ರಾಣ ಭಾವ ಲಿಂಗಗಳ ಸಿದ್ಧಿಗಳ ಕುರಿತಾಗಿ ಪರಸ್ತ್ರೀಸಂಗವನ್ನು ಹೇಳಿದುದಂತೂ ವಿಕಾರವಾಗಿದೆ ಅಪಹಾಸ್ಯಕಾರಕವಾಗಿದೆ ಅವಹೇಳನವಾಗಿದೆ. ಇದು ಗ್ರಂಥಕರ್ತನ ಕಾಮುಕ ಮನೋಭೂಮಿಕೆಯನ್ನೇ ನಿದರ್ಶಿಸುತ್ತದೆ; ಅಲ್ಲದೆ ವೀರಶೈವರ ಸಮರಸ ಭಕ್ತಿಯನ್ನು ಹೀಯಾಳಿಸುವಂತಿದೆ.

## H72 ಅರ್ಥಗೌರವ

ಇನ್ನು ಇದರಲ್ಲಿ ಬಳಸಿದ ಪದ— ಮುಖ್ಯವಾಗಿ ಬಸವಣ್ಣನವರನ್ನು ಕುರಿತು ಆಡಿದುವು— ಗಳನ್ನು ಕುರಿತು ಸ್ವಲ್ಪದರಲ್ಲಿ ಹೇಳುವುದು ಕ್ರಮ ಪ್ರಾಪ್ತವಾಗಿದೆ. ಬಸವಣ್ಣನವರು ವೀರಶೈವ ಪ್ರಥಮಾಚಾರ್ಯ, ಜಗದ್ವಂದ್ಯಪುರುಷ, ಪೂಜ್ಯವ್ಯಕ್ತಿ, ಮಹಾಮಹಿಮ, ಮಂತ್ರಪುರುಷ, ಅವರ ಮನ ದೃಷ್ಟಿ ಭಾವ ಹಸ್ತಗಳು ಪರುಷ. ಇವೆಲ್ಲವೂ ಸರ್ವಗ್ರಾಹ್ಯವಾದ ಅಭಿಪ್ರಾಯಗಳು; ವೀರಶೈವ ಸಾಹಿತ್ಯದಲ್ಲೆಲ್ಲ ಇವು ಒಡಮೂಡಿವೆ. ಆದರೆ ಇವಕ್ಕೆ ವಿರೋಧವಾಗಿ ಮುಕ್ತಿಕಂಠಾಭರಣದಲ್ಲಿ ಅವರನ್ನು ಹೀನಾಯಮಾನವಾಗಿ ಜರೆಯಲಾಗಿದೆ. ಅದಕ್ಕಾಗಿ ಬಳಸಿದ ಪದಗಳು ಇವು— ದುಷ್ಟ ಭ್ರಷ್ಟ ಭಂಡ, ಹುಳಬಿದ್ದ ಶ್ವಾನನಂತೆ ಬೊಗಳಿ ಬೋಳಾದವ ಮುಂತಾದವು. ಇವು ಬೀದಿಯ ಬೈಗುಳಂತೆ ಇವೆ. ಅಲ್ಲದೆ ಅವರ ವ್ಯಕ್ತಿತ್ವ ಹಾಗು ಕಾರ್ಯ ಹನನದ ಉದ್ದೇಶದಿಂದ ನುಡಿದ ಪದಗಳು ಇವು— "ಬಸವಯ್ಯನಾಡಿದುದು ನಿಜವಲ್ಲ. ಆತ ತಳವಿಲ್ಲದ ಮಗಿಯು"; "ಬಸವನ ನುಡಿ ಕಸವಾಯಿತ್ತಲ್ಲ"; "ಸಂಗನಬಸವಯ್ಯನಾಜ್ಞೆ ಮಸಿಯಾಯಿತ್ತಲ್ಲ"; "ಮೂವತ್ತಾರು ಸಂವತ್ಸರ

ಮಾಡಿಟ ಭಕ್ತಿ ಹೋಮದಲ್ಲಿ ಕತ್ತೆ ಮೂತ್ರ ಬಿಟ್ಟಂತಾಯಿತ್ತಯ್ಯಾ ಬಸವನ ನುಡಿ"; ಇವುಗಳ ಹೊರತಾಗಿ ಪರ್ಯಾಯವಾಗಿ "ಮತದ ವ್ಯವಸ್ಥೆ ಮಾಡುವಾತನೋರ್ವನತಿ ಮೂರ್ಖ" ಎಂದು ಬಸವಣ್ಣನವರನ್ನು ನಿಂದಿಸಲಾಗಿದೆ. ಇವೆಲ್ಲಕ್ಕೆ ಮಿಗಿಲಾಗಿ ವಚನ ೧೧೩ ದಲ್ಲಿ ಬಸವಣ್ಣನವರ ಬಗ್ಗೆ ಸರ್ವಗ್ರಾಹ್ಯ ಅಭಿಪ್ರಾಯ— ಶೂನ್ಯಸಂಪಾದನೆ ಗ್ರಂಥದಲ್ಲಿ— ವ್ಯಕ್ತವಾದುದನ್ನು ಖಂಡಿಸಿ ಈ ಬಗೆಯಾಗಿ ಹೇಳಲಾಗಿದೆ.—"ಕಾರಣಪುರುಷನೆಂದು ನಿನ್ನ ನಾಮದಿಂದರ್ಚನೆಯ ಮಾಡಿದೆ ಎನ್ನ ಪ್ರಾಣಲಿಂಗಪ್ರತಿಬಿಂಬೆಂಬಿಷ್ಟಲಿಂಗವ, ಸದಾಶಿವ ಪುರುಷನೆಂದು ನಿಮ್ಮ ನಾಮದಿಂದ ಪಾದೋದಕಪ್ರಸಾದವ ಕೊಂಡೆನತಿ ಭಕ್ತಿಯಿಂದ. ಅನಾದಿಪರಶಿವಕಳೆಯೆಂದು ನಿನ್ನ ನಾಮವನೆಸಗಿದೆ ಷಡಕ್ಷರಿಯ ಮಂತ್ರದಗ್ರದಲ್ಲಿ, ನುಡಿದು ಲೇಸು ಮಾಡಿದೆ. ಸಾಕು ಸಾಕು ನಿನ್ನ ಪೂಜೆ ನಿನ್ನ ಭಕ್ತಿ ಗುಹೇಶ್ವರಲಿಂಗಕ್ಕೆ ಭ್ರಷ್ಟ ಬಸವಾ".

ಇದರಿಂದ ಮುಕ್ತಿಕಂಠಾಭರಣದ ಗ್ರಂಥಕರ್ತನು ಬಸವನಿಂದಕನು ಹಾಗು ಬಸವ-ದ್ವೇಷಿ ಎಂಬುದು ಸಿದ್ಧವಾಗುತ್ತದೆ; ಕಾರಣ ಬಸವಣ್ಣನವರನ್ನು ಹೀನ ಹಾಗು ದುಷ್ಟ ಶಬ್ದಗಳಿಂದ ಜರೆದಿದ್ದಾನೆ. ಹೀಗಿರುವಾಗ ಮುಕ್ತಿಕಂಠಾಭರಣದ ಸಂಪಾದಕರು ಆ ಗ್ರಂಥದ ಬಗ್ಗೆ 'ಸಾಹಿತ್ಯದ ಸುಧೆ' ಎಂದು ನುಡಿದುದು ಯಥಾರ್ಥವಾಗಿರದೆ ಉಚಿತವಾಗಿರದೆ ಕೇವಲ ವಿಕಟವಾಗಿ ಪ್ರಶಂಸಾಪರವಾಗಿದೆ ಎಂಬುದು ಖಂಡಿತವಾಗುತ್ತದೆ. ಇಲ್ಲಿ ವಿವರಿಸಿದುದರ ಮೇಲಿಂದ ಸಾಹಿತ್ಯದ ಸುಧೆ ಎನ್ನುವುದಕ್ಕಿಂತ ಸಾಹಿತ್ಯದ ಸುರೆ ಎಂದರೆ ಉಚಿತವಾಗಬಹುದು.

ಒಟ್ಟಿನ ಮೇಲೆ ಹೇಳಬೇಕಾದರೆ ಸಂಪಾದಕರು ಮುಕ್ತಿಕಂಠಾಭರಣದ ಪ್ರಶಂಸಾಪರವಾಗಿ ಹೇಳಿದುದು 'ಶಗಣಿಯ ಬೆನಕಂಗೆ ಅರಳಮಲ್ಲಿಗೆ ಏರಿಸಿದಂತಾಗಿದೆ' ಎನ್ನಬಹುದು.

———

# I ಅಂಜನ

## ಮುಕ್ತಿಕಂಠಾಭರಣದ ಸಮರ್ಥನೆಗಾಗಿ ಹೊರಡಿಸಿದ ಸ್ಪಷ್ಟೀಕರಣಕ್ಕೆ*

## I1 ಉತ್ತರ

(೧) ಮುಕ್ತಿಕಂಠಾಭರಣ ಗ್ರಂಥದಲ್ಲಿ ೭೨೬ ವಚನಗಳಿವೆಯೇ ಹೊರತು ಸ್ಪಷ್ಟೀಕರಣದಲ್ಲಿ ಹೇಳಿದಂತೆ ೫೫೫ ವಚನಗಳು ಅಲ್ಲ. ೧ನೇ ಪುಟದ ೨ನೇ ಪ್ಯಾರಾದಲ್ಲಿ ಹೇಳಿದ ವಚನ ಸಂಖ್ಯೆಯು ೮೬೨ ಆಗಿರದೆ ೪೬೨ ಇದೆ. ಈ ರೀತಿ ತಪ್ಪು ಮಾಡುವಲ್ಲಿ ಮುಕ್ತಿಕಂಠಾಭರಣದ ಸಂಪಾದನೆಯಲ್ಲಿ ಮಾಡಿದ ಅದಕ್ಷತೆಯನ್ನೇ ಇಲ್ಲಿಯೂ ತೋರಿಸಿದ್ದಾರೆ.

(೨) ಮೂಲದಲ್ಲಿ (ವ ೯೯, ೫೪೫) 'ಮೊಲೆಯೆಂಬ' ಇದ್ದುದನ್ನು ಸ್ಪಷ್ಟೀಕರಣವಲ್ಲಿ 'ಮೊಲೆಯುಂಬ' ಎಂದು ಹೇಳಲಾಗಿದೆ. ·ಅದರಂತೆಯೇ ಮೂಲದಲ್ಲಿ (ವ. ೧೧೭) 'ಆಡಲು ಭಯವಿಲ್ಲ' ಇದ್ದುದನ್ನು 'ಆಡಲು ಉಭಯುವಿಲ್ಲ' ಎಂದು ಮಾಡಲಾಗಿದೆ. ಹೀಗೇಕೊ! ಇದು ಸ್ಪಷ್ಟೀಕರಣವಲ್ಲ, ವಂಚನಾಕರಣ; ಸ್ವವಂಚನೆ ಪರವಂಚನೆ ಆಗಿದೆ.

(೩) ನನ್ನ ಲೇಖಗಳಲ್ಲಿ ಟೀಕಿಸಿದುದನ್ನು ನಾಲ್ಕು (ಪುಟ ೮ ನೋಡಿರಿ) ಮುದ್ದೆಗಳನ್ನಾಗಿ ಹೇಳಿದ್ದಾರೆ. ಆದರೆ ಮುಖ್ಯವಾದ ಒಂದು ಟೀಕೆಯನ್ನೇ ಮರೆ ಮಾಚಿದ್ದಾರೆ. ಅದಾವುದೆಂದರೆ—(೧) ಸಂಪಾದಕರು ಸಂಸ್ಕರಣ (ಸಂಪಾದನಾ) ಕಾರ್ಯವನ್ನು ಎಳ್ಳಷ್ಟೂ ಮಾಡಿಲ್ಲ (ಲೇಖ ೧ ನೋಡಬಹುದು). ಅದರ ನಿದರ್ಶನಕ್ಕಾಗಿ (ಲೇಖ ೨ರಲ್ಲಿ) ಅನವಶ್ಯಕವಾಗಿ ನಿರರ್ಥಕವಾಗಿ ಪುಟದ

---

*ಇದನ್ನು ಮುಕ್ತಿಕಂಠಾಭರಣದ ಸಂಪಾದಕರಾದ ಡಾ. ಆರ್. ಸಿ. ಹಿರೇಮಠ ಅವರು ಹೊರಡಿಸಿದಂತೆ ತಿಳಿಯುತ್ತದೆ. ಇದರ ಉತ್ತರಾರ್ಧವು ಪರಂಜ್ಯೋತಿ (ಆಗಸ್ಟ ೧೯೭೨) ಯಲ್ಲಿ, ಮತ್ತು ಸಂಪೂರ್ಣವಾಗಿ ವಿಶ್ವಕಲ್ಯಾಣ (ವಾರಪತ್ರಿಕೆ, ಯಾದಗಿರಿ)ದ ಸಪ್ಟಂಬರ-ಆಕ್ಟೋಬರ ೧೯೭೨ ಸಂಚಿಕೆಯಲ್ಲಿ ಪ್ರಕಟವಾಗಿದೆ.

ವಿಸ್ತಾರದ ಅಲ್ಪಾಂಶದಲ್ಲಿ ಮಾತ್ರ ಮುದ್ರಿಸುವ ಮೂಲಕ ಗಾತ್ರವನ್ನು ಹೆಚ್ಚಿಸುವ ಕುತಂತ್ರ ಬಳಸಿದ್ದಾರೆ. (೨) ವಿರಾಮ ಚಿನ್ಹೆಗಳನ್ನು ಬಳಸಿರುವುದರಲ್ಲಿ (ಲೇಖ ೩) ಕ್ರಮವಿಲ್ಲ, ಪದ್ಧತಿಯಿಲ್ಲ, ನಿಯಮವಿಲ್ಲ; ಅದೊಂದು ವಂಚನೆ (Tom foolery) ಯಾಗಿದೆ, ಎಂಬುದಾಗಿ. ಇವಕ್ಕೆ ಉತ್ತರವಿಲ್ಲ. ಅಂದ ಮೇಲೆ ನನ್ನ ಟೀಕೆಗಳನ್ನು ಒಪ್ಪಿಕೊಂಡಂತಾಯಿತು. ಹೀಗೆ ಮಾಡಿರುವುದು ಅಂದರೆ ಗಾತ್ರವರ್ಧನ ಕುತಂತ್ರ ಮತ್ತು ವಿರಾಮ ಚಿನ್ಹಗಳ Tom foolery ಮುಕ್ತಿಕಂಠಾಭರಣ ಗ್ರಂಥಕ್ಕೆ ಮಾತ್ರವೇ ಸೀಮಿತವಾಗಿಲ್ಲ; ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾಗಿರುವ ವಚನವಾಙ್ಮಯ ಗ್ರಂಥಗಳೆಲ್ಲದರಲ್ಲಿಯೂ ಹೀಗೆ ಮಾಡಲಾಗಿದೆ. (ಭಾರತದಂತಹ ಬಡ ದೇಶದಲ್ಲಿ ಆಡಂಬರ ಅಟ್ಟಹಾಸ ದುಂದುಗಾರಿಕೆಯ ಪ್ರಕಟನೆಗಳು ಸರ್ವಥಾ ಸಲ್ಲವು). ಇದು ಗಂಭೀರವಾಗಿ ಆಲೋಚಿಸಬೇಕಾದ ವಿಷಯ.

(೪) ನನ್ನ ಲೇಖ (೬)ದಲ್ಲಿ ಮುಕ್ತಿಕಂಠಾಭರಣವು ಅಸಂಗತ ವಿಸಂಗತ ಅಸಂಬದ್ಧ ಪ್ರಲಾಪಗಳಿಂದ ತುಂಬಿದೆ ಎಂದು ನಿದರ್ಶಿಸಿದ್ದೇನೆ. ಆದುದರಿಂದ ಅದೊಂದು ಗ್ರಂಥವೆನ್ನುವಂತೆ ಇಲ್ಲ. ಇದಕ್ಕಾವ ಉತ್ತರವೂ ಸ್ಪಷ್ಟೀಕರಣವೂ ಇಲ್ಲ. ಇದಕ್ಕೆ ಇನ್ನೊಂದು ನಿದರ್ಶನವನ್ನು ಇಲ್ಲಿ ಹೇಳುವೆ. ವಚನ IV-೨೪ದಲ್ಲಿ " ಲಿಂಗದ ಸಿಲುಕಡೆ ಅಂಗದಲ್ಲಿ ಎಂತು? ಬೆಸಗೊಂಬ ಬಾರಾ ಗುಹೇಶ್ವರ ಶರಣ ಚನ್ನಬಸವಣ್ಣಂಗೆ ಸಿದ್ಧರಾಮಯ್ಯಾ " ಎಂದಿದೆ. ಹೀಗಿರುವಾಗ ಇದರ ಮುಂದಿನ ವಚನ ೨೬-೩೭ ಗಳು ಪ್ರಭುದೇವರವು ಆಗಿವೆ; ಮತ್ತು ಆಕ್ಷೇಪ ಕಾರಕ ಹೇಳಿಕೆಗಳು ಬಂದಿವೆ.

## I2 ಗ್ರಂಥಕರ್ತೃ

ಮುಕ್ತಿಕಂಠಾಭರಣದ ಕರ್ತೃವಿನ ಬಗ್ಗೆ ಈ ಸ್ಪಷ್ಟೀಕರಣದಲ್ಲಿ ಹೇಳಲಾಗಿದೆ. ಆದರೆ ಪ್ರಕಟಿಸಿದ ಗ್ರಂಥದಲ್ಲಿ ಹೇಳಿಲ್ಲ. ಅದರ ಬಗ್ಗೆ ಪುಟ ೪ರಲ್ಲಿ ಹೀಗೆ ಹೇಳಲಾಗಿದೆ—" ಗ್ರಂಥ ಪೂರ್ತಿಯಾಗಿ ದೊರೆಯದಿದ್ದುದರಿಂದ ಇದರ ಕರ್ತೃ ಕಾಲ, ಇವುಗಳ ಬಗೆಗೆ ಯಾವ ವಿಷಯಗಳನ್ನು ಖಚಿತವಾಗಿ ಹೇಳುವುದು ಸಾಧ್ಯವಿಲ್ಲ. " ಈಗ ಹೇಳಿರುವ ಹೇಳಿಕೆಯಾದರೂ ಸಮಂಜಸವಿಲ್ಲ,

ಸಮರ್ಥನೀಯವಿಲ್ಲ; ಅಸಮರ್ಪಕವಾಗಿದೆ. ಈಗ್ಗೆ ಇದರ ಕರ್ತೃ "ಸಿದ್ಧವೀರ ಸ್ವಾಮಿಗಳು* ಎಂದು ಹೇಳಲಾಗಿದೆ. ಹೀಗೆ ಹೇಳುವಾಗ ವಿಚಾರಗೊಂದಲ ದಲ್ಲಿ ಬಿದ್ದಂತಿದೆ. ಮೂಲಗ್ರಂಥ, ಮೂಲಪ್ರತಿ ಇವುಗಳ ಭೇದವನ್ನು ತಿಳಿದು ಕೊಂಡಿಲ್ಲ. ಮೂಲ ಪ್ರತಿ ಎಂದರೆ ಸ್ಥಳಪ್ರತಿ, ಆ ಸ್ಥಾನದಲ್ಲಿ ದೊರಕುವ ಪ್ರತಿ, ಹೊರತು ಮೂಲ ಗ್ರಂಥವಲ್ಲ. ಇದರಂತೆಯೆ ರಚಿಸು, ಬರೆ, ಸೇರಿಸು ಇವುಗಳ ಭೇದವನ್ನು ಗ್ರಹಿಸಿದಂತಿಲ್ಲ. ಗ್ರಂಥಕ್ಕೆ ರಚನೆ ಎಂದು ಮತ್ತು ಪ್ರತಿಗೆ ಬರೆ (ಅಂದರೆ ಪ್ರತಿಮಾಡು) ಎಂಬ ಶಬ್ದ ಪ್ರಯೋಗವನ್ನು ವಚನಕಾರರು ಸಾಮಾನ್ಯ ವಾಗಿ ಬಳಸಿದ್ದಾರೆ. ಇದರಿಂದ ಸಿದ್ಧವೀರಸ್ವಾಮಿಯು ಬರೆದವನು (ಪ್ರತಿ ಮಾಡಿದವನು) ಹೊರತು ಗ್ರಂಥಕರ್ತನಲ್ಲ. ಆದುದರಿಂದಲೇ ತನ್ನದೊಂದು ವಚನವನ್ನು ಪ್ರತಿ ಮಾಡುವಾಗ "ಈ ಸಿದ್ಧವೀರ ಸ್ವಾಮಿಗಳು ತಮ್ಮದೊಂದು ವಚನವನ್ನು 'ಮುಕ್ತಿಕಂಠಾಭರಣ'ದಲ್ಲಿ ಸೇರಿಸಿರುವರು [ಇದು ಸ್ಪಷ್ಟೀಕರಣ-ಕಾರರು ಹೇಳಿದ ಮಾತು]"—ಸೇರಿಸಲಾಗಿದೆ ಎಂಬುದು ಸ್ಪಷ್ಟವಾಗುತ್ತದೆ.

## 13 ಕಲ್ಪಿತ ವಚನಗಳು

ನನ್ನ ಹೇಳಿಕೆಯನ್ನು—ಇದರಲ್ಲಿಯ ವಚನಗಳು ಕಲ್ಪಿತವಾದವು—ಎಂಬುದನ್ನು ಅಲ್ಲಗಳೆಯಲಿಕ್ಕೆ "ಕೆಲವು ವಚನಗಳಲ್ಲಿ ಬಂದಿರುವ ಬಿರುನುಡಿ ಗಳೇ (ಕಟೂಕ್ತಿಗಳೇ) ಈ ಆರೋಪಕ್ಕೆ ಕಾರಣವಾಗಿರಬೇಕು" ಎಂದಿದ್ದಾರೆ. ಇದು ಸತ್ಯಕ್ಕೆ ದೂರವಾದುದು. ಈ ಗ್ರಂಥದಲ್ಲಿ ಉದ್ಧೃತವಾಗಿರುವ ವಚನ ಗಳೆಲ್ಲವೂ ನಿಜವಾದವು, ಆ ಆ ಶರಣ ಶರಣೆಯರಿಂದಲೇ ರಚಿತವಾದವು, ಅವು ಪ್ರಮಾಣಿತವಾದುವು ಎಂದು ಹೇಳುವ ಹಾಗೂ ಸಿದ್ಧಮಾಡುವ ಗೋಜಿಗೆ ಸ್ಪಷ್ಟೀಕರಣಕಾರರು ಹೋಗಿಲ್ಲ. ಈ ಗ್ರಂಥದಲ್ಲಿ ೪೨ ಶರಣ ಶರಣೆಯರ ವಚನಗಳು ಬಂದಿವೆ ಎಂಬುದನ್ನು ಹೇಳಿದ್ದಾರೆ. ಅದರಲ್ಲಿ ೧. ವೇದಕಂಚುಕಿ, ೨. ಸೌಂದರಿದೇವಿ, ೩. ಆಗಮಮೋಹಿನಿ, ೪. ಶಾಂಭವಿ ಇವರ ಹೆಸರನ್ನು ಹೇಳಲಾಗಿದೆ. ಇಷ್ಟು ಮಾತ್ರ ಹೇಳಿ ಸುಲಭದಲ್ಲಿ ಜಾರಿಕೊಂಡಿದ್ದಾರೆ. ಆದರೆ

---

* [ ಈ ಸಂಬಂಧದಲ್ಲಿ ಪರಿಚ್ಛೇದ C1–5, H4 ಸಹ ನೋಡಿರಿ. ]

ಇವರು ವೀರಶೈವ ಶರಣೆಯರು ಅಲ್ಲ. ಕೇವಲ ಕಾಲ್ಪನಿಕ ಹೆಸರುಗಳಾಗಿದ್ದರೂ ಇರಬಹುದು. ನಾನು ಆಧಾರಪೂರ್ವಕವಾಗಿ (ಲೇಖ ೪) ಹೇಳಿರುವುದು "ಸಂಶೋಧನೆಯ ವಿಧಿವಿಧಾನಗಳಿಂದ ಇದು ಚೋರಕೃತಿ ಎಂದು ಸಿದ್ಧ ಮಾಡಿದ್ದೇನೆ. ಅವೆಲ್ಲ ವಿವರಗಳನ್ನು ಇಲ್ಲಿ ಸ್ಥಳಾವಕಾಶದ ಭಯದಿಂದ ಹೇಳಿಲ್ಲ. ಆದರೆ ಇದರಲ್ಲಿ ಉದ್ಧೃತವಾಗಿರುವ ೨೬೫ ಪ್ರಭುದೇವರ ವಚನಗಳಲ್ಲಿ ಅಧಿಕೃತ ಹಾಗು ನಿಜವಾದ ವಚನಗಳು ೩೦ ಮಾತ್ರ ಇವೆ, ಎಂಬುದು ಇಷ್ಟೇ ಸಾಕು.... ಈ ಬಗೆಯಾಗಿ ಇಡೀ ಗ್ರಂಥದಲ್ಲಿ ಸುಮಾರು ೩೦೦ ವಚನಗಳು ಸಂಬೋಧನಾ ಪರವಾಗಿವೆ. ಇದೊಂದೇ ಅಂಶವು ಈ ಗ್ರಂಥವು ಚೋರಕೃತಿ ಎಂದು ನಿರ್ಧರಿಸಲು ಸಾಕು."

ಈ ಬಗೆಗೆ ಸ್ಪಷ್ಟೀಕರಣಕಾರರು ಇನ್ನೂ ಒಂದು ಮಾತನ್ನು (ಪುಟ ೧೨.೨) ಹೇಳಿದ್ದಾರೆ: ಮುಕ್ತಿಕಂಠಾಭರಣವನ್ನು ಕಲ್ಪಿತ ವಚನಗಳ ಕೃತಿಯೆಂದು ಖಂಡಿಸಿದರೆ ಶೂನ್ಯಸಂಪಾದನೆ, ಲಿಂಗಲೀಲಾವಿಲಾಸಚಾರಿತ್ರ ದಂತಹ ಅಪಾರವಾದ ವಚನಸಾಹಿತ್ಯ ಕೃತಿಗಳೂ ಖಂಡನೆಗೆ ಗುರಿಯಾಗ ಬಹುದಾಗಿವೆ." ಈ ಗ್ರಂಥವು ಖಂಡನೆಗೆ ಗುರಿಯಾಗಿರುವುದು ಕೇವಲ ಅದರಲ್ಲಿರುವ ವಚನಗಳು ಕಾಲ್ಪನಿಕ ಎಂಬ ಮಾತ್ರದಿಂದಲ್ಲ. ಮಿಗಿಲಾಗಿ ಬಸವಣ್ಣನವರ ನಿಂದೆ, ಅವರ ಬಗೆಗೆ ಅವಾಸ್ತವ ದೂಷಣೆ, ಪ್ರಭುದೇವರ ವಿಚಿತ್ರ ವ್ಯಕ್ತಿ ಚಿತ್ರಣ, ಹೇಯ ಅಸಹ್ಯ ಅಶ್ಲೀಲ ತುಚ್ಛ ಆಚಾರವಿಚಾರಗಳ ಹೇಳಿಕೆಗಳ ಮೂಲಕ ಶರಣರ ಹಾಗು ವೀರಶೈವದ ಅಪಚಾರ, ಅಸತ್ಯ ಸಂಗತಿ (ಇವುಗಳನ್ನು ಲೇಖ ೬ ರಲ್ಲಿ ಹೇಳಲಾಗಿದೆ) ಇವು ಮುಖ್ಯವಾಗಿ ಖಂಡನೆಗೆ ಗುರಿಯಾಗಿವೆ. ಶೂನ್ಯ ಸಂಪಾದನೆ ಮತ್ತು ಲಿಂಗಲೀಲಾವಿಲಾಸ ಚಾರಿತ್ರ ಗ್ರಂಥಗಳು ಹಾನಿಕಾರಕವಲ್ಲ.

ಈ ಸಂಬಂಧದಲ್ಲಿ ಲಿಂ. ಪ್ರೊ. ಬಸವನಾಳರ ಹೆಸರನ್ನು ಎತ್ತಿ ಹೀಗೆ ಹೇಳಿದ್ದಾರೆ—' ಬಸವನಾಳರು ತಮ್ಮ ಬಸವಣ್ಣನವರ ಷಟ್‌ಸ್ಥಲದ ವಚನಗಳ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿದ್ದರು". ಬಸವನಾಳರು ಪ್ರಸ್ತುತ ಮುಕ್ತಿಕಂಠಾ. ಭರಣದ ಪ್ರತಿಯನ್ನು ನೋಡಿಲ್ಲ. ಏಕೆಂದರೆ ಅವರು ಉಲ್ಲೇಖಿಸಿದ ವಚನ

ಸಂಖ್ಯೆಗೂ ಇದರಲ್ಲಿರುವ ವಚನಸಂಖ್ಯೆಗೂ ಸರಿಹೋಗುವುದಿಲ್ಲ. ಅವರು ಉದ್ಧರಿಸಿದ ವಚನಗಳ ಸಂಖ್ಯೆಗಳು ೨೫೬, ೨೨೪ ಇದ್ದರೆ ಇದರಲ್ಲಿಯ ಅವೇ ವಚನಗಳ ಸಂಖ್ಯೆಗಳು ೨೮೮, ೨೭೬ ಇವೆ. ಆದುದರಿಂದ ಆ ಪ್ರತಿ ಬೇರೆ ಈ ಪ್ರತಿ ಬೇರೆ ಎಂಬುದು ಸ್ಪಷ್ಟವಿದೆ. ಇದಲ್ಲದೆ ಬಸವನಾಳರು ಮುಕ್ತಿಕಂಠಾಭರಣ ಗ್ರಂಥವನ್ನು ವಿಶ್ವಸನೀಯವಾಗಿ, ಗ್ರಾಹ್ಯವಾಗಿ, ಗಣಿಸಿಲ್ಲ. ಹೇಗೆಂದರೆ— ಬಸವನಾಳರಿಂದ ಸಂಪಾದಿತವಾಗಿ ಸಾಹಿತ್ಯ ಸಮಿತಿ, ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ, ಧಾರವಾಡ ಇವರಿಂದ ಪ್ರಕಟವಾದ ೧೯೬೨ ಆವೃತ್ತಿಯಲ್ಲಿ ಕೊಟ್ಟಿರುವ ಅನುಬಂಧ "ಬಸವಣ್ಣನವರ ಹೆಚ್ಚಿನ ವಚನಗಳು"ದಲ್ಲಿ (೧) ವಚನಶಾಸ್ತ್ರಸಾರ (೨) ಗಣಭಾಷ್ಯರತ್ನಮಾಲೆ (೩) ಸಿಂಗಿರಾಜ ಪುರಾಣ (೪) ಪ್ರಭುಲಿಂಗಲೀಲೆ (೫) ಲಿಂಗಲೀಲಾ ವಿಲಾಸಚಾರಿತ್ರ (೬) ಏಕೋತ್ತರ ಶತಸ್ಥಲ (೭) ಗೂಳೂರ ಸಿದ್ಧವೀರಣ್ಣನ ಶೂನ್ಯಸಂಪಾದನೆ (೮) ಸರ್ವಪುರಾತನರ ವಚನಗಳ ಕಟ್ಟು (೯) ಶಿವಗಣ ಪ್ರಸಾದಿಯ ಶೂನ್ಯಸಂಪಾದನೆ, ಈ ಗ್ರಂಥಗಳಲ್ಲಿಯ ವಚನಗಳನ್ನು ಎತ್ತಿಕೊಂಡಿರುವರೇ ಹೊರತು, ಕರ್ನಾಟಕ ವಿಶ್ವವಿದ್ಯಾಲಯುದವರು ಪ್ರಕಟಿಸಿದ"ಬಸವಣ್ಣನವರ ವಚನಗಳು" ಸಂಗ್ರಹ— ಇದರಲ್ಲಿಯ ಹೆಚ್ಚಿನ ವಚನಗಳಲ್ಲಿ ೧೯ ಮುಕ್ತಿಕಂಠಾಭರಣದಿಂದ ಎತ್ತಿಕೊಂಡವು ಆಗಿವೆ—ದಂತೆ ಈ ಮುಕ್ತಿಕಂಠಾಭರಣದಲ್ಲಿಯ ವಚನಗಳನ್ನು ಸೇರಿಸಿಲ್ಲ.

ಆದುದರಿಂದ ಇವೆಲ್ಲ ವಚನಗಳು ನಿಜವಾದವು ಪ್ರಮಾಣಿತವಾದವು ಕೃತಕವಲ್ಲ ಎಂದು **ಸಿದ್ಧಮಾಡಿ ತೋರಿಸುವ ಹೊಣೆ ಸಂಪಾದಕರ ಮೇಲೆ ಇನ್ನೂ ಇದೆ.** ಅಲ್ಲದೆ ನನ್ನ ಲೇಖ ೬ ರಲ್ಲಿ ಮುಕ್ತಿಕಂಠಾಭರಣದಲ್ಲಿ ಬಂದಿರುವ ಅಸತ್ಯ ಸಂಗತಿಗಳನ್ನು ಹೇಳಿರುವೆ. **ಅವು ಸತ್ಯವಾದವುಗಳೆಂದು** [ಅವರು] **ಪ್ರಮಾಣಿಸಬೇಕಾಗಿದೆ.**

## I4 ಕಟೂಕ್ತಿ

ಪುಟ ೧೧ ರಲ್ಲಿ ಕೆಲವು ಕಟೂಕ್ತಿಗಳನ್ನು ಉದಹರಿಸಲಾಗಿದೆ. ಇದರಲ್ಲಿ ಎರಡನ್ನು ಕುರಿತು ಹೇಳುವೆ—

"೧. ಆನು ಸೂಳೆ ನಮ್ಮಕ್ಕನೂ ಸೂಳೆ (ಬ. ವ. ೩೨೭)

೭. ಚೆನ್ನಯ್ಯನ ಮನೆಯ ದಾಸಿಯ ಮಗನು, ಕಕ್ಕಯ್ಯನ ಮನೆಯ ದಾಸಿಯ ಮಗಳು.... ಇವರಿಬ್ಬರಿಗೆ ಹುಟ್ಟಿದ ಮಗ ನಾನು "

ಇವರಿಂದ ಕಂಡುಬರುವುದೇನಂದರೆ— ಅತ್ಯಂತ ವಿನಮ್ರಭಾವದಿಂದ ಸ್ವಯಂ ತೃಣೀಕರಣ, ಕಃಪದಾರ್ಥವೆಂಬ ಭಾವನೆಯಿಂದ ಅಹಂಕಾರ* ನಿರಸನದಿಂದ ಬಸವಣ್ಣನವರು ಹೀಗೆ ಆತ್ಮಸಂಬೋಧನೆ ಮಾಡಿಕೊಂಡದ್ದಕ್ಕೂ ಪರರು (ಪ್ರಭುದೇವರು) ಬಸವಣ್ಣನನ್ನು ಬಾಯಿಗೆ ಬಂದಂತೆ ಬಯ್ದಿರುವುದಕ್ಕೂ ಭೇದವನ್ನು ಸ್ಪಷ್ಟೀಕರಣಕಾರರು ಕಂಡುಕೊಂಡಂತಿಲ್ಲ. ಇದು ಅವಿವೇಕ.

## I5 ಪಾಠಾಂತರ

ನನ್ನ ಜನೆ ಲೇಖದಲ್ಲಿ ಪಾಠಾಂತರಗಳನ್ನು ಸರಿಪಡಿಸಲು ಸಂಪಾದಕರು ಏನೂ ಮಾಡಿಲ್ಲ ಎಂಬುದನ್ನು ಉದಾಹರಣೆಗಳಿಂದ ಸ್ಪಷ್ಟಪಡಿಸಿದ್ದೇನೆ. ಅದಕ್ಕೆ ಸ್ಪಷ್ಟೀಕರಣಕಾರರು ಈ ರೀತಿಯಾಗಿ "ಏಕೈಕ ಹಸ್ತಪ್ರತಿಯಿರುವಾಗ ಸಂಪಾದಕರಿಗೆ ಅದರಲ್ಲಿ ಯಾವ ಮಾರ್ಪಾಡುಗಳನ್ನೂ ಮಾಡಲು ಸ್ವಾತಂತ್ರ್ಯವಿರುವುದಿಲ್ಲ. ಹತ್ತೆಂಟು ಪ್ರತಿಗಳಿದ್ದರೆ ಅವುಗಳನ್ನು ಗ್ರಂಥಸಂಪಾದನಾ ಶಾಸ್ತ್ರದ ಒರೆಗೆ ಹಚ್ಚಿ ಮೂಲ ಪಾಠವನ್ನು ನಿರ್ಣಯಿಸಲು ಆಸ್ಪದವಿರುತ್ತದೆ" ಹೇಳಿರುವುದೂ ಎಷ್ಟೂ ಸಮಂಜಸವಿರುವುದಿಲ್ಲ. ಕರ್ತವ್ಯಚ್ಯುತಿಗೆ ಇದೊಂದು ಕುಂಟನೆವ(Lame excuse). ಪಾಠಾಂತರಗಳನ್ನು ಸರಿಪಡಿಸಲಿಕ್ಕೆ ಅಸಮಂಜಸತೆಯನ್ನು ವಿರೋಧಾಭಾಸವನ್ನು ತೊಡೆದು ಹಾಕಲಿಕ್ಕೆ ಮತ್ತು ಅವುಗಳ ಮೇಲೆ ಬೆಳಕು ಚೆಲ್ಲಲು ಚೌಕ ಕಂಸಗಳನ್ನು ಹಾಗು ಅಡಿಟಿಪ್ಪಣಿಗಳನ್ನು ಉಪಯೋಗಿಸುವ ವಿಧಾನವು ಸರ್ವತ್ರವಾಗಿ ಹಾಗು ಶಾಸ್ತ್ರೀಯವಾಗಿ ಬಳಕೆಯಲ್ಲಿದೆ. ಹಾಗೆ ಮಾಡದೆ ಕರ್ತವ್ಯಚ್ಯುತಿಯ ಆರೋಪಕ್ಕೆ ಗುರಿಯಾಗಿದ್ದಾರೆ.

ಅಲ್ಲದೆ, ಏನಿದ್ದರೂ ಇದು (ಮುಕ್ತಿಕಂಠಾಭರಣವು) ಒಂದು ಸಂಕಲನ ಗ್ರಂಥ. ಇದರಲ್ಲಿ ಬಂದಿರುವ ವಚನಗಳು ಆ ಆ ವಚನಕಾರರ ವಚನಗಳ

---

* [ಅಹಂಕಾರ ಮನವನಿಂಬುಗೊಂಡಲ್ಲಿ ಲಿಂಗ ತಾನೆಲ್ಲಿಪ್ಪುದೊ, ಅಹಂಕಾರಕ್ಕೆ ಎಡೆಗುಡದೆ ಲಿಂಗತನುವಾಗಿರಬೇಕು. ಅಹಂಕಾರ ರಹಿತವಾದಲ್ಲಿ ಸನ್ನಿಹಿತಕಾಣಾ ಕೂಡಲಸಂಗಮದೇವ.].

ಮೂಲ ಗ್ರಂಥಗಳಿಂದ ಎತ್ತಿಕೊಂಡಿರುವವು ಆಗಿವೆ. ಹೀಗಿರುವಾಗ ವಚನಗಳ ಮೂಲ ಹಾಗು ಪ್ರಮಾಣಿತ ಗ್ರಂಥಗಳನ್ನು ಆಧರಿಸಿದ ಪಾಠಾಂತರಗಳನ್ನು ಹೇಳಿದ್ದರೆ ಯಥೋಚಿತವಾಗುತ್ತಿತ್ತು; ಯಾವ ರೀತಿಯ ಭಂಗವೂ ಉಂಟಾಗುತ್ತಿರಲಿಲ್ಲ. ಓದುಗರು ವಚನಗಳ ಅರ್ಥ ಭಾವಗಳನ್ನು ಗ್ರಹಿಸಲಿಕ್ಕೆ ಸುಗಮವಾಗುತ್ತಿತ್ತು. ಉದಾಹರಣಾರ್ಥವಾಗಿ ಕ. ವಿ. ವಿ. ದವರು ೧೯೬೫ ರಲ್ಲಿ ಪ್ರಕಟಿಸಿದ ಚನ್ನಬಸವಣ್ಣನವರ ವಚನ ಗ್ರಂಥದೊಂದಿಗೆ (ಅದು ೮೦ ಮೂಲ ಪ್ರತಿಗಳ ಆಧಾರದ ಮೇಲೆ ಸಂಪಾದಿತವಾಗಿದೆ) ಈ ಗ್ರಂಥದಲ್ಲಿ ಉಕ್ತವಾಗಿರುವ ಚನ್ನಬಸವಣ್ಣನವರ ೮೨ ವಚನಗಳ ಪಾಠಗಳನ್ನು ತೂಗಿ ನೋಡಿದ್ದರೆ ಇವುಗಳಲ್ಲಿಯ ತಪ್ಪುಗಳು "ಮಕ್ಷಿಕಾ ಮಕ್ಷಿ" ಯಾಗಿ ಉಳಿಯುತ್ತಿದ್ದಿಲ್ಲ. ಇದರಂತೆಯೇ ಬಸವಣ್ಣ ಮತ್ತು ಸಿದ್ಧರಾಮರ ವಚನಗಳ ಬಗ್ಗೆಯೂ ಹೇಳಬಹುದು. ಆದುದರಿಂದ ಸಂಪಾದಕರು ಈ ಬಗ್ಗೆ ಖಂಡಿತವಾಗಿಯೂ ಕರ್ತವ್ಯಚ್ಯುತರಾಗಿದ್ದಾರೆ.

ಇದೂ ಅಲ್ಲದೆ ಪುಟ ೧೬ ರಲ್ಲಿ ಹೀಗೆ ನುಡಿದಿದ್ದಾರೆ— "ಇಲ್ಲಿ ಬಂದ ವಚನಗಳು ಬೇರೆ ಕಡೆಗೆ ಉಪಲಬ್ಧವಿದ್ದರೂ ಆ ಆಕರಗಳನ್ನು ನೋಡಿ ಇವನ್ನು ಪರಿಷ್ಕರಣ ಮಾಡಲಾಗಿಲ್ಲ. ಈ ಆಕರದ ವಚನಗಳು ಇದ್ದಕ್ಕಿದ್ದಂತೆಯೆ ಪ್ರಕಟವಾಗುವುದು ಅವಶ್ಯವಿದ್ದುದರಿಂದ ಹಾಗೆ ಮಾಡಲಾಗಿಲ್ಲ". ಹೀಗೆ ಮಾಡುವ ಅವಶ್ಯಕತೆ ಏನಿತ್ತೊ ಅದನ್ನು ಹೇಳಿಲ್ಲ; ಅದು ಸಂಪಾದಕರಿಗೆನೇ ಗೊತ್ತು. ಹೀಗಿದ್ದರೂ ಪಾಠಭೇದಗಳನ್ನು ಪಾಠಾಂತರಗಳನ್ನು ಇತರ ಆಕರಗಳ ಆಧಾರದ ಮೇಲಿಂದ ಅಡಿಟಿಪ್ಪಣಿಗಳಲ್ಲಿ ಕೊಡಬಹುದಾಗಿತ್ತಲ್ಲ! ಹೀಗೆ ಮಾಡಿದ್ದರೆ ಅವುಗಳ ಗುಣ ಶೀಲ ವೈಶಿಷ್ಟ್ಯಗಳಿಗೇನೂ ಭಂಗ ಬರುತ್ತಿದ್ದಿಲ್ಲ. ಆದುದರಿಂದ ಇದೊಂದು ಕುಂಟುನೆವ ಮತ್ತು ಸಂಪಾದಕರು ಈ ದೆಸೆಯಲ್ಲಿ ಕರ್ತವ್ಯಚ್ಯುತರಾಗಿದ್ದಾರೆಂಬುದು ಖಂಡಿತ.

ಮೇಲಾಗಿ ಇದೇ ಪುಟದಲ್ಲಿ "ಗ್ರಂಥಸಂಸ್ಕರಣ ತತ್ವಗಳ ಮರ್ಯಾದೆಯಲ್ಲಿಯೇ ಇದರ ಪರಿಷ್ಕರಣ ಕಾರ್ಯವನ್ನು ಮಾಡಲಾಗಿದೆ" ಎಂದು ಹೇಳಿಕೊಂಡಿದ್ದಾರೆ. ಇದಕ್ಕೆ ಪ್ರತಿಯಾಗಿ ನಾನು ಸಂಪಾದನೆ (ಪರಿಷ್ಕರಣ) ಕಾರ್ಯ

ವನ್ನು ಏನೇನೂ ಮಾಡಿಲ್ಲ ಎಂದು ಹೇಳಿ ಅದನ್ನು ಪ್ರತಿಯೊಂದು ಅಂಶಗಳಿಂದ ವಿವರಿಸುತ್ತ ಹೊರಟಿದ್ದೇನೆ. ಆದುದರಿಂದ ಸಂಪಾದಕರ ಮೇಲೆ (೧) **ಸಂಸ್ಕರಣ ತತ್ವಗಳು ಯಾವುವು ?** ಅವುಗಳ ಮರ್ಯಾದೆ ಏನು (೨) ಅದನ್ನು ಎಂತು ಜರುಗಿಸಿದ್ದಾರೆ ಎಂಬುವನ್ನು **ವಿಶದೀಕರಿಸುವ ಹೊಣೆ** ಇದ್ದೇ ಇದೆ; ಅದರಿಂದ ಮುಕ್ತರಾಗಿಲ್ಲ.

## I6 ಬಸವಣ್ಣನವರ ಮುಖಭಂಗ

ಬಸವಣ್ಣನವರನ್ನು ಹೀನಾಯಮಾನವಾಗಿ ೧೨ ವಚನಗಳಲ್ಲಿ ಸತತ (Continuously) ಜರೆದುದನ್ನು ಸ್ಪಷ್ಟೀಕರಣಕಾರರು ಲಘುವಾಗಿ ಭಾವಿಸಿದ್ದಾರೆ,ತೇಲಿಸಿ ಹೇಳಿದ್ದಾರೆ; ಅಲ್ಲದೆ ಅದನ್ನು ಸಮರ್ಥಿಸಿಕೊಳ್ಳುವಂತೆಯೂ ನುಡಿದಿದ್ದಾರೆ. ಅವರು ಹೇಳಿರುವ ಅಂಶಗಳು ಇವು :—(೧)ಬಸವಣ್ಣನವರ ಬಗೆಗೆ ಸದಭಿಪ್ರಾಯದ ನುಡಿಗಳು ಗ್ರಂಥದಲ್ಲಿ ಅನೇಕವಾಗಿವೆ. (೨) " ಬಸವಣ್ಣನವರ ಈ ಎರಡು ಉತ್ತರಗಳಲ್ಲಿ [ (a) ದಾಂಪತ್ಯ ಸುಖವನ್ನು ಅನುಭೋಗಿಸುವುದನ್ನು ಅನುಮೋದಿಸುವುದು (b) ಸ್ತ್ರೀ ಸಂಬಂಧವಾದ ಅನೀತಿ ದುರಾಚಾರಗಳನ್ನು ಖಂಡಿಸುವುದು, ಇವುಗಳಲ್ಲಿ] ಪ್ರಭುದೇವರು ಕ್ರಮವಾಗಿ ಅನುಭಾವ ಮತ್ತು ಭಕ್ತಿಗಳ ಕೊರತೆಯನ್ನು ಕಾಣುತ್ತಾರೆ ". ಹಾಗಾದರೆ ಪರಸತಿಯರ ಸಂಗವನ್ನು ಅನುಮೋದಿಸುವುದು, ಅದಕ್ಕೆ ಆಸ್ಪದ ಒದಗಿಸುವುದು ಅರ್ಥಾತ್ ಹಾದರವನ್ನು ಎತ್ತಿ ಹಿಡಿಯುವುದು ಅನುಭಾವ ಮತ್ತು ಭಕ್ತಿ ಎಂಬುದಾಗಿ ಈ ಗ್ರಂಥಸಂಪಾದಕರ ಅಭಿಪ್ರಾಯವೋ ! ! ? ೨೦ನೆಯ ಶತಮಾನದಲ್ಲಿ ವಿಶ್ವವಿದ್ಯಾಲಯದ ಪ್ರಾಧ್ಯಾಪಕರು ಹೀಗೆ ಹೇಳುವುದು ತೀರ ಹಾಸ್ಯಾಸ್ಪದ ಹಾಗು ನಿಂದಾಸ್ಪದವಾಗಿದೆ. (೩) " ಗುಹೇಶ್ವರನ ಶರಣರು ನುಡಿದು ಸೂತಕಿಯಲ್ಲ (ಪುಟ ೧೦, ೧೧) " ಈ ಹೇಳಿಕೆಯು ವಚನ ೧೦೬ ದಲ್ಲಿಯ " ಅಂತಪ್ಪ ಜಂಗಮ ನಿನ್ನ ಸತಿ ಮುಟ್ಟದಡೆ ಪಾವನವಲ್ಲದೆ ಪಾಪಿಯೆ " ಹೇಳಿಕೆಯಂತೆಯೆ ಮೋಸದ ಮಾತುಗಳಾಗಿ ಕಾಣುತ್ತವೆ.

ಬಸವಣ್ಣನವರ ಬಗ್ಗೆ ಸದಭಿಪ್ರಾಯದ ನುಡಿಗಳು ಗ್ರಂಥದಲ್ಲೆಲ್ಲ ಬಂದಿವೆ ಎಂದು ಹೇಳುವುದರಲ್ಲಿ ಏನೂ ಹುರುಳಿಲ್ಲ. ಏಕೆಂದರೆ ಇಂತಹ ಸದಭಿಪ್ರಾಯ

ವನ್ನು ಹೊಡೆದು ಹಾಕುವಂತೆಯೇ ಗ್ರಂಥಕರ್ತನ ಭಾಷೆಯಲ್ಲಿ ಹೇಳಬೇಕಾದರೆ "ಹೋಮದಲ್ಲಿ ಕತ್ತೆ ಮೂತ್ರ ಬಿಟ್ಟಂತೆ"—ಉದ್ದಿಶ್ಯಪೂರ್ವಕವಾಗಿ ೧೨ ವಚನಗಳಲ್ಲಿ ಬಸವಣ್ಣನನ್ನು ಜರೆಯಲಾಗಿದೆ. ಇದು ಒಂದು ವಚನದಲ್ಲಿ ಸ್ಪಷ್ಟವಾಗಿದೆ, ಖಂಡಿತವಾಗಿದೆ— "....ನಿನ್ನ ನಾಮದಿಂದರ್ಚನೆಯ ಮಾಡಿದೆ.... ನಿಮ್ಮ ನಾಮದಿಂದ ಪಾದೋದಕಪ್ರಸಾದವ ಕೊಂಡೆನತಿ ಭಕ್ತಿಯಿಂದ.... ನಿಮ್ಮ ನಾಮವನೆಸಗಿದೆ ಷಡಕ್ಷರಿಯ ಮಂತ್ರದಗ್ರದಲ್ಲಿ.... ಸಾಕು ಸಾಕು ನಿನ್ನ ಪೂಜೆ ನಿನ್ನ ಭಕ್ತಿ ಗುಹೇಶ್ವರ ಲಿಂಗಕ್ಕೆ ಭ್ರಷ್ಟ ಬಸವಾ" (ವ ೧೧೩). ಇದಕ್ಕಿಂತಲೂ ತಿರಸ್ಕಾರಯುಕ್ತವಾಗಿ "ಮೂವತ್ತಾರು ಸಂವತ್ಸರ ಮಾಡಿದ ಭಕ್ತಿ ಹೋಮದಲ್ಲಿ ಕತ್ತೆ ಮೂತ್ರ ಬಿಟ್ಟಂತಾಯಿತ್ತಯ್ಯಾ ಬಸವನ ನುಡಿ" ಎನ್ನಲಾಗಿದೆ. ಇದರಿಂದ ಬಸವಣ್ಣನವರ ವ್ಯಕ್ತಿತ್ವಹನನವಾಗಿದೆಯಲ್ಲದೆ ಅವರ ಘನತರ ಕಾರ್ಯದ ಹನನವೂ ಆಗಿದೆ.

ಹೀಗೆ ನಿಂದಿಸಿದುದರಿಂದ ಬಸವಣ್ಣನವರ ಮುಖಭಂಗವಾದಂತಾಗಿ ಪಶ್ಚಾತ್ತಾಪ ಪಟ್ಟು ನುಡಿದಂತೆ ವಚನ ೧೧೭ವನ್ನು— "ಬಸವರಾಜರು ಗದ-ಗದನೆ ನಡುಗಿ ನಡುಗದಂತೆ ಸಾಷ್ಟಾಂಗವಿಕ್ಕಿ ಎದ್ದು ಕರಾಂಜಲಿತರಾಗಿ ನುಡಿದ ವಚನ"— ಎಂಬ ಪೀಠಿಕೆಯೊಂದಿಗೆ "ಹಿಂದಿನಂತನುಭವ ಹಿಂದಿನಂತೆ ಭಕ್ತಿ ಇಲ್ಲ" ಎಂದು ಕಲ್ಪಿಸಿ ಹೇಳಲಾಗಿದೆ.

ಸ್ಪಷ್ಟೀಕರಣಕಾರರು ಈ ದಿಸೆಯಲ್ಲಿ ಇನ್ನೂ ಒಂದನ್ನು ಹೇಳಿದ್ದಾರೆ— "ಈ ಸನ್ನಿವೇಶವನ್ನು 'ಲೀಲೆಗಾಡಿರುವೆ'ನೆಂದು ಪ್ರಭುದೇವರೇ (ಪುಟ ೯೧ ವ. ೧೬೭) ಸ್ಪಷ್ಟಪಡಿಸಿರುವರು". ಗ್ರಂಥಕರ್ತನು ಹೀಗೆ ಹೇಳಿರುವುದನ್ನು ಪೂರ್ವಾಪರ ಸಂದರ್ಭ, ಗ್ರಂಥದ ತಿರುಳು ಹಾಗು ಹುರುಳು ಇವುಗಳೊಡನೆ ಪರಾಮರ್ಶಿಸಿ ನೋಡಿದರೆ ಇದು ಕಣ್ಣೀರೊರಸುವ ಹೇಳಿಕೆಯಂತಾಗಿದೆ. ಬಸವಭಕ್ತರಲ್ಲಿ ಕ್ಷೋಭೆಯುಂಟಾಗಬಾರದೆಂದು (Policy) ಸಮಾಧಾನ ಮಾಡಲಾಗಿದೆ. ಆದರೆ ಇದರಿಂದ ಗ್ರಂಥಕರ್ತನ ದುಷ್ಟಬುದ್ಧಿ ದುರ್ಭಾವನೆಗಳು ಮರೆಮಾಚಲಾರವು. ಏಕೆಂದರೆ ಇದೇ ದುಷ್ಟಬುದ್ಧಿ ಭಾವದಲ್ಲಿ ಬಸವಣ್ಣನವರನ್ನು ಜರೆದುದು, ಅಲ್ಪರಿದುದು ಇನ್ನೂ ಎರಡು ಕಡೆ ಕಂಡುಬರುವುದು.—

(೧) "ಬಸವಯ್ಯನಾಡಿದುದು ನಿಜವಲ್ಲ. ಆತ ತಳವಿಲ್ಲದ ಮುಗಿಯು" (II ೩೨); (೨) "ಅಂತರಂಗ ಬಹಿರಂಗ ಆತ್ಮಸಂಗ ಒಂದೆಯೆಂಬ ಬಸವನ ನುಡಿ ಕಸವಾಯಿತ್ತಲ್ಲ" (IV ೩೫೯).

ಹೀಗೆ ಜರೆದಿರುವುದಕ್ಕೆ ಕಾರಣ ಹುಡುಕಹೊರಟರೆ ಅದರಿಂದ ಬಸವಣ್ಣನ ಗುಣ ಶೀಲ ಉದಾತ್ತ ಭಾವನೆಗಳು ಕಂಡುಬರುವವು. ಮತ್ತು ಬಸವಣ್ಣನವರನ್ನು ಜರೆದಿರುವ ಪ್ರಭುದೇವರ ಬಗೆಗೆ ಅನಾದರ ತಿರಸ್ಕಾರಭಾವ ಉಂಟಾಗುವವು. ಹೇಗೆಂದರೆ ಪ್ರಭುದೇವರು ಬಸವಣ್ಣನವರನ್ನು ಜರೆಯಲಾಗಿರುವ ವಚನ ೧೦೫-೧೧೬ ಗಳ ಹಿಂದೆ ಇರುವ ಬಸವಣ್ಣನವರ ೯೮-೧೦೪ ವಚನಗಳಲ್ಲಿ ಪರಸ್ತ್ರೀಯರ ಬಗ್ಗೆ ಸದಭಿಪ್ರಾಯ ಸದ್ವರ್ತನೆ ಸದ್ಭಾವನೆಯು ಇರಬೇಕೆಂಬುದನ್ನು ಪ್ರತಿಪಾದಿಸಲಾಗಿದೆ, ವಿವರಿಸಲಾಗಿದೆ. ಇದಕ್ಕೆ ವಿರೋಧವಾಗಿ ಪರಸ್ತ್ರೀಸಂಗವನ್ನು ಬಯಸುವದು ಸಾಧಿಸುವದು ಅಸಾಧುವಲ್ಲವೆಂದು ಪ್ರತಿಪಾದಿಸುವ, ಹಾದರವು ನಿರ್ದುಷ್ಟ (ಗ್ರಂಥದ ಕೊನೆಯ ಭಾಗವನ್ನು ನೋಡಬಹುದು) ವೆಂದು ಹೇಳುವ ಗ್ರಂಥಕರ್ತನು ಬಸವಣ್ಣನನ್ನು ಪ್ರಭು-ದೇವರ ಮುಖಾಂತರವಾಗಿ (ಏಕೆಂದರೆ ಇವುಗಳು ಪ್ರಮಾಣಿತವಾದ ವಚನಗಳಲ್ಲ) ಜರೆದಿದ್ದಾನೆ.

ಒಟ್ಟಾರೆ ಹೇಳಬೇಕೆಂದರೆ ಅಲ್ಲಲ್ಲಿ-ದಿಕ್ಕು ದಿಕ್ಕಿನಲ್ಲಿ ತರಗ ಚಲ್ಲಿದಂತೆ-ಬಸವಣ್ಣನವರ ಬಗೆಗೆ ಪ್ರಕಟವಾಗಿರುವ ಸದಭಿಪ್ರಾಯಕ್ಕೆ ವಿರೋಧವಾಗಿ ಸಮಗ್ರವಾಗಿ ಮಾರ್ಮಿಕವಾಗಿ ಏಕತ್ರ (ಕಣ್ಣಲ್ಲಿ ಚುಚ್ಚುವಂತೆ) ವಾಗಿರುವ ೧೨ ವಚನಗಳಲ್ಲಿ ಬಸವಣ್ಣನವರನ್ನು ಜರೆದುದನ್ನು ಬಸವಣ್ಣನವರ ಉಪಮೆ-ಯಲ್ಲಿಯೇ ಹೇಳಬೇಕಾದರೆ "ಜೆಳ್ಳೆತ್ತಿನ ಮರೆಯಲ್ಲಿ ಹುಲ್ಲೆಗಂಬುವ ತೊಡುವಂತೆ" ಆಗಿದೆ.

× × × ×

ನನ್ನ ಮೊದಲನೆ ಲೇಖದಲ್ಲಿ ಎತ್ತಿದ ಎರಡು ಪ್ರಶ್ನೆಗಳಿಗೆ—(೧) ಬಸವಣ್ಣನವರ ದಾಂಪತ್ಯ ವಿಷಯವನ್ನು (ನೀಲಮ್ಮನ ಶೀಲವನ್ನು) ಪ್ರಶ್ನಿಸಲಾಗಿದೆ, (೨) ಸ್ತ್ರೀ-ಸಂಭೋಗವೇ ಲಿಂಗಾಂಗ ಸಮರಸವೆಂಬಂತೆ ಧ್ವನಿತವಾಗಿದೆ—

ನೇರವಾದ ಸ್ಪಷ್ಟವಾದ ಉತ್ತರ ದೊರಕಿಲ್ಲ. "ವೈಯಕ್ತಿಕ ಅಭಿರುಚಿ", ವೈಯಕ್ತಿಕ ಅಭಿಪ್ರಾಯ ಎಂದು ಹೇಳಿ ಜಾರಿಕೊಳ್ಳಲಾಗಿದೆ. ವೈಯಕ್ತಿಕ ಅಭಿರುಚಿ ಅಭಿಪ್ರಾಯಗಳು ಶಾಸ್ತ್ರೀಯ ವಿಮರ್ಶೆಯ ಅಂಗಾಂಗಗಳಾಗಲಾರವು; ಅದರಲ್ಲಿ ಅವುಗಳಿಗೆ ಸ್ಥಾನವಿಲ್ಲ. ಆದುದರಿಂದ ವಚನಗಳ ಗುಣ, ಶೀಲ, ವಚನವಾಙ್ಮಯದಲ್ಲಿ ಪ್ರಕಟವಾದ ಆಚಾರ ವಿಚಾರದ ನೆಲೆಗಟ್ಟು ಇವುಗಳನ್ನು ಒರೆಗಲ್ಲಾಗಿ ಇಟ್ಟುಕೊಂಡು ವಿಮರ್ಶಿಸಲಾಗಿದೆ.

## I7 ಸಮರಸ

ಈ ಮೊದಲು ಉದಹರಿಸಿದ ವಚನಗಳೊಂದಿಗೆ ವಚನ IV ೩೨ ವನ್ನು ಸೇರಿಸಿಕೊಂಡು ವೀರಶೈವರ ಲಿಂಗಾಂಗ ಸಮರಸಭಾವವನ್ನು ಎಂತು ವಿಪರೀತ ಗೊಳಿಸಲಾಗಿದೆ ಎಂಬುದನ್ನು ಕಂಡುಕೊಳ್ಳಬಹುದು— "....ಎರಡು ನೇತ್ರ ಒಂದಾದ ಲಲಾಟ ನೇತ್ರವೆಂಬ ಭಗನೇತ್ರದಲ್ಲಿ ಇಷ್ಟಲಿಂಗವೆಂಬ ಗುಹ್ಯವನು ಮುಳುಗಿಸುವುದೀಗ ಲಿಂಗಾಂಗ ಸಮರಸವು ನೋಡಾ.... ನೇತ್ರದ್ವಯಗಳೆಂಬ ಕುಚಂಗಳೆರಡು ಹಿಡಿದುದೀಗ ಲಿಂಗಾಂಗ ಸಮರಸವು .... " ಇದರಂತೆಯೆ ಚುಂಬನ ಕ್ರಿಯೆಯ ವಿಷಯವಾಗಿ ಹೇಳಲಾಗಿದೆ. ಇದು ಪುರುಷನು ಸ್ತ್ರೀ-ಸಂಭೋಗದಲ್ಲಿ ಉದ್ಯುಕ್ತನಾದಾಗ ನಡೆಯುವ ಕ್ರಿಯೆಯ ಚಿತ್ರಣವು. ಇದಕ್ಕೇನೆನ್ನಬೇಕು ?

ನನ್ನ ಲೇಖದಲ್ಲಿ "ಸ್ತ್ರೀ-ಸಂಭೋಗವೇ ಲಿಂಗಾಂಗ ಸಮರಸವೆಂಬಂತೆ ಧ್ವನಿತವಾಗಿದೆ" ಎಂದು ಹೇಳಿರುವುದನ್ನು ಪರ್ಯಾಯವಾಗಿ "ಇದರ ವಚನಗಳು ವಾಮಾಚಾರವನ್ನು ಎತ್ತಿಹಿಡಿಯುತ್ತವೆ" ಎಂಬುದಾಗಿಸಿ ಅದರ ನಿರಸನವನ್ನು ಮಾಡಹೊರಡಲಾಗಿದೆ. ಇಲ್ಲಿ ವಾಮಾಚಾರವೆಂದು ಹೇಳಿರುವುದು ಸರಿಯಲ್ಲ. ಏಕೆಂದರೆ ಶಾಕ್ತರಲ್ಲಿ 'ದಕ್ಷಿಣಪಂಥ' 'ವಾಮಪಂಥ' ಎಂದು ಎರಡು ಮಾರ್ಗಗಳಿವೆ. ವಾಮಪಂಥವನ್ನು ವಾಮಾಚಾರವನ್ನು ಪ್ರತಿಪಾದಿಸುವವರೂ ಆಚರಿಸುವವರೂ ಇದ್ದಾರೆ. ಅದರ ಕುರಿತು ವಾಙ್ಮಯವು ಉಂಟು. ಆದರೆ ಹಾಗೆ ವೀರಶೈವರಲ್ಲಿ ಇಲ್ಲ. ಆದುದರಿಂದ ಇಲ್ಲಿ ವಾಮಾಚಾರವೆಂದು ಹೇಳಿರುವುದು ಸರಿಯಾಗಿಲ್ಲ. ಅದಕ್ಕೆ ಉಚಿತವಾದ ಪದವು ದುರ್ಮಾರ್ಗ.

ಈ ಮೊದಲು ಎತ್ತಿದ ವಚನ IV. ೫೧ "ಪರಸ್ತ್ರೀಸಂಗ.... ಇಷ್ಟಲಿಂಗ ಸಿದ್ಧಿ"* ಇದರಲ್ಲಿ ದುಷ್ಟವಾದುದೇನೂ ಇಲ್ಲ, ಸುಷ್ಟವಾಗಿದೆ ಎಂದು ಪ್ರತಿಪಾದನೆ ಮಾಡಹೊರಟು ಏನೇನೋ ದ್ರಾವಿಡ ಪ್ರಾಣಾಯಾಮ ಮಾಡಿದ್ದಾರೆ. ಹೀಗೆ ಹೇಳಿರುವುದು— ದುರುಳ ವೇದಾಂತದಂತೆ— ದುರುಳ ಅನುಭಾವವಾಗಿದೆ. ಇಂತಹ ಅರ್ಥವು ಸುಗಮವಾಗಿಲ್ಲ, ಗ್ರಾಹ್ಯವಾಗುವುದಿಲ್ಲ. ಏಕೆಂದರೆ ಇದರಲ್ಲಿ ಪುರುಷನು ಸ್ತ್ರೀಯರ ಭೋಗ ಮಾಡುವ ಕಲ್ಪನೆ ಇದೆ. ಆದುದರಿಂದ ಇದು ವೀರಶೈವರ ವಿಚಾರಧಾರೆಗೆ ಅನುಗುಣವಾಗಿಲ್ಲ. ಇದು ಏಕಮುಖವಾದ ಸಾರ್ವತ್ರಿಕವಲ್ಲದ ಸರ್ವರಿಗೂ ಅನ್ವಯವಾಗದ ವಿಚಾರ ಹಾಗು ಕಲ್ಪನೆ. ಇಂತಹ ಅರ್ಥವಿವರಣೆ ಏಕಮುಖವಾದಂತಹ ಸನಾತನ ಹಿಂದೂಧರ್ಮ— ಇದರಲ್ಲಿ ಧಾರ್ಮಿಕ ವಿಚಾರ ಹಾಗು ಆಚಾರಗಳು ಪುರುಷರ ಕುರಿತಾಗಿವೆ; ಅವರಿಗಾಗಿ ಮೀಸಲಾಗಿವೆಯೇ ಹೊರತು ಸ್ತ್ರೀಯರಿಗೆ ಇವುಗಳಿಗೆ ಸ್ಥಾನ ಇಲ್ಲವೆ ಅಧಿಕಾರವು ಇಲ್ಲ— ಮತ್ತು ಇಂತಹ ಇತರ ಧರ್ಮಗಳ ರೀತಿಯಲ್ಲಿ ಹೇಳಲಾಗಿದೆ. ಆದರೆ ವೀರಶೈವ ಧರ್ಮಾಚರಣೆಯಲ್ಲಿ ಸರ್ವರಿಗೂ ಸಮಾನ ಅಧಿಕಾರ ಹಾಗು ಬಾಧ್ಯತೆ ಇವೆ. ಆದುದರಿಂದ ವೀರಶೈವರಿಗೆ ಇದು ಸಲ್ಲದ ವಿಚಾರ.

ಹಾಗಾದರೆ ಸ್ತ್ರೀಯರನ್ನು ನೋಡದ ನುಡಿಸದ ಮುಟ್ಟದ ವಿರಕ್ತ ಸಮುದಾಯದ ಕುರಿತು ಇದನ್ನು ಹೇಗೆ ಅರ್ಥವಿಸಬೇಕು? ಪರಸ್ತ್ರೀಸಂಗವೇ ಇಷ್ಟಲಿಂಗಸಿದ್ಧಿಯ Acid Test ಒರೆಗಲ್ಲು ಎಂದಾಗ ಇದನ್ನರಿಯದ ಅರಿಯಲಿಚ್ಛಿಸದ ವಿರಕ್ತರ ಕುರಿತು ಏನೆಂದು ಭಾವಿಸಬೇಕು; ಇವರು ಇಷ್ಟಲಿಂಗ ಸಿದ್ಧಿಗೆ ಬಾಹಿರರೋ? ಹೊರತಾಗಿ ಇದನ್ನು ಸ್ತ್ರೀಯರ ಕುರಿತಾಗಿ ಆಲೋಚಿಸುವಾಗ ಸ್ತ್ರೀ ಎಂಬಲ್ಲಿ ಪುರುಷ, ಪರಸ್ತ್ರೀ ಎಂಬಲ್ಲಿ ಪರಪುರುಷ ಎಂಬ ಪ್ರತಿಶಬ್ದವನ್ನು ಹೇಳಿಕೊಂಡು ಅರ್ಥವಿಸಬೇಕೋ?

ಇದಲ್ಲದೆ ಇಲ್ಲಿ 'ಇಷ್ಟಲಿಂಗಸಿದ್ಧಿ' ಎಂದು ಹೇಳಿದುದು ಸಹ ವಿಚಿತ್ರವಾಗಿದೆ. ಇಂತಹ ಪದಪ್ರಯೋಗವನ್ನು ಇದುವರೆಗೆ ಯಾವ ವಚನಗಳಲ್ಲಿಯೂ

---

*[ಈ ಸಂಬಂಧದಲ್ಲಿ ಪರಿಚ್ಛೇದ F4-41, F9, H32, ಸಹ ನೋಡಬಹುದು.]

ಕಂಡಿಲ್ಲ. ಇದರ ಅರ್ಥವು ಕೂಡ ವೀರಶೈವ ವಿಚಾರಧಾರೆಗೆ ನಿಲುಕದು, ಸಿಲುಕದು. ಯೋಗದಲ್ಲಿ ಸಿದ್ಧಿಗಳ ಕುರಿತಾಗಿ ಹೇಳಲಾಗುತ್ತದೆ; ಅಲ್ಲಿ ಸಿದ್ಧಿ ಎಂದರೆ ಅಮಾನುಷ ಅತಿಮಾನವ ಶಕ್ತಿಸಿದ್ಧಿಯಾಗಿದೆ (ಆದರೆ ಅವುಗಳನ್ನು ಬಳಸಕೂಡದೆಂಬ ನಿಷೇಧದ ಕಟ್ಟೂ ಇದೆ). ಅದರಂತೆಯೇ ಇಲ್ಲಿ ಶಕ್ತಿಸಿದ್ಧಿಯು ವಿಚಾರವಿದೆಯೇ? ಹಾಗಾದರೆ ಇದಕ್ಕೆ ಸ್ವಸ್ತ್ರೀ, ಪರಸ್ತ್ರೀ ಸಂಭೋಗ ಶಕ್ತಿ ಎನ್ನಬಹುದೆ?

ಮೇಲಾಗಿ ವೀರಶೈವರ ಅನುಭಾವ ಭಕ್ತಿಸಾಧನೆಯಲ್ಲಿ ಅದರಲ್ಲೊದಗುವ ಸಮರಸವು "ಶರಣಸತಿ ಲಿಂಗಪತಿ" ಎಂಬ ವಿಚಾರ ಹಾಗು ಭಾವನೆಯಲ್ಲಿ ತನ್ಮಯವಾಗಬೇಕಾಗುತ್ತದೆಯೇ ಹೊರತು ಪುರುಷ ಭಾವ ಕ್ರಿಯೆಗಳಿಂದಲ್ಲ. ಇದನ್ನು ಆದಯ್ಯನು ತನ್ನ ಒಂದು ವಚನದಲ್ಲಿ ಆತ್ಮವು ಪುರುಷವಾದರೂ ಲಿಂಗದಲ್ಲಿ ಐಕ್ಯವಾಗುವ ಆತುರತೆಯಿಂದ ಸ್ತ್ರೀತ್ವವನ್ನು ಹೊಂದುತ್ತದೆ ಎಂದಿದ್ದಾನೆ.

ಹೀಗೆಲ್ಲ ವಿಚಾರಿಸಿದಾಗ ಸ್ಪಷ್ಟೀಕರಣಕಾರರು ಆ ವಚನಕ್ಕೆ ಅರ್ಥ ಹೇಳಿದುದು ಯಾವ ರೀತಿಯಿಂದಲೂ ಸಮಂಜಸವಿಲ್ಲ. ಪ್ರತಿಯಾಗಿ ಅಗ್ರಾಹ್ಯವಾಗಿದೆ.

ಆಕ್ಷೇಪಣೀಯವಾದ ವಚನಗಳ ಬಗ್ಗೆ 'ವಾಚ್ಯಾರ್ಥದಲ್ಲಿ ಅರ್ಥ-ಮಾಡುವ ವಚನಗಳಲ್ಲ' ಎಂದು ಸ್ಪಷ್ಟೀಕರಣಕಾರರು ಹೇಳಿದುದು ಸಹ ವಸ್ತುಸ್ಥಿತಿಯ ಮೇಲೆ ಮುಸುಕೆಳೆಯುವ ಹೇಳಿಕೆಯಾಗಿದೆ. ಏಕೆಂದರೆ ಗ್ರಂಥಕರ್ತನು ವಾಚ್ಯಾರ್ಥ ಸ್ವಷ್ಟಾರ್ಥಗಳನ್ನೇ ಉದ್ದೇಶಿಸಿದ್ದಾನೆ. ಆದುದರಿಂದಲೇ ಈ ಗ್ರಂಥದ ಕೊನೆಯಲ್ಲಿ ಹಾದರವು ಆಕ್ಷೇಪಣೀಯವಾಗಲಾರದೆಂಬ ಭಾವದಲ್ಲಿ ವಚನಗಳನ್ನು ರಚಿಸಿದ್ದಾನೆ. ಇಷ್ಟಲಿಂಗಸಿದ್ಧಿಯ ಬಗೆಗೆ ವಚನ IV. ೫೧ ರಲ್ಲಿ ನುಡಿದುದು ವಾಮಾಚಾರದ ಶಾಕ್ತರು ಸ್ತ್ರೀ-ಸಂಭೋಗವನ್ನು ಮಾತೆಯ ಸಂಪ್ರೀತನಾರ್ಥವಾಗಿ ಮಾಡಲಾಗುವದು ಎಂದು ಹೇಳುವ ಪರಿಯಲ್ಲಿಯೇ ಇದೆ. ಇದಲ್ಲದೆ ಈ ವಚನದಲ್ಲಿ ಇಷ್ಟಲಿಂಗಸಿದ್ಧಿ ಪ್ರಾಣಲಿಂಗಸಿದ್ಧಿ ಭಾವ-ಲಿಂಗಸಿದ್ಧಿಗಳಿಗೆ ಸ್ತ್ರೀ-ಸಂಗವು ಸಾಧನಮಾರ್ಗವೆಂದು ಹೇಳಿದ ಗ್ರಂಥಕಾರನೇ

ಮುಂದಿನ ವಚನ ೫೩ ರಲ್ಲಿ ಇದು 'ಶಾಂಭವ ಕೃತ್ಯ'— ಶಾಕ್ತಮತದ ವಾಮ ಪಂಥದಲ್ಲಿ ಭೈರವಿ, ಶಾಂಭವಿ ಎಂಬ ಒಳಭೇದಗಳಿವೆ— ಎಂದು ಪ್ರಭುದೇವರಿಂದ ನುಡಿಸಿರುವಾಗ, ವೀರಶೈವದ ಪರಿಯಲ್ಲಿ ಅದಕ್ಕೆ ಅರ್ಥ ಹಚ್ಚುವದು ತೀರ ದುಃಸಾಹಸವಾಗಿದೆ.

## I8 ದುರ್ಮಾರ್ಗ

ಸ್ಪಷ್ಟೀಕರಣಕಾರರು ಈ ಗ್ರಂಥದ ಕೊನೆಯ ವಚನ ೫೩೧-೫೫೪ ಗಳಲ್ಲಿ ನುಡಿದಿರುವ ಹಾದರದ ಬಗೆಗೆ ಚಕಾರವೆತ್ತಿಲ್ಲ, ಸುಮ್ಮನಿದ್ದಾರೆ. ಏಕೆಂದರೆ ಅವನ್ನು ಸಮರ್ಥಿಸಿಕೊಳ್ಳಲು ಇಲ್ಲವೆ ಅವುಗಳನ್ನು ಸಹ 'ವಾಚ್ಯಾರ್ಥದಲ್ಲಿ ಅರ್ಥಮಾಡುವ ವಚನಗಳಲ್ಲ' ಎಂದು ಹೇಳುವುದು ಧಾರ್ಷ್ಟ್ಯವಾಗುತ್ತದೆ. ಈ ಗ್ರಂಥದ ಉದ್ದೇಶವು ಹಾದರವು ಖಂಡನೀಯವಲ್ಲವೆಂದು ಪ್ರತಿಪಾದಿಸುವಂತಿದೆ. ಮೊದಲಲ್ಲಿ ಕೆಲವು ವಚನಗಳಲ್ಲಿ "ಸ್ಥೂಲಾಂಗದಲ್ಲಿ ಕಿಲ್ಬಿಷ ಕಾರ್ಯಂಗಳಿಲ್ಲದಿರೆ ಇಷ್ಟಲಿಂಗಸಂಬಂಧ" (ವಚನ IV. ೧), "ಶಿವಾಚಾರಿ ನೀನಾಗಬೇಕೆಂಬಿಚ್ಛೆ ತೋರ್ದಡೆ.... ಬಿಡುವುದಯ್ಯಾ ಸ್ತ್ರೀಸಂಸರ್ಗವ, ಬಿಡುವುದಯ್ಯಾ ಪರದ್ರವ್ಯಾಪಹಾರವ...." (ವ. ೨) ಎಂಬುದಾಗಿ ನುಡಿಸಿ ವಚನ ೩೨, ೩೩, ೫೧ ಗಳಲ್ಲಿ ಅಶ್ಲೀಲ ದುರಾಚಾರವೆನಿಸುವ ಸಂಭೋಗಕ್ಕೆ (ಕೀಳಾಗಿ) ಸಮರಸಭಾವ ಕೀಲಿಸಿ ಮುಂದೆ ವಚನ ೧೦೫-೧೧೬ ಗಳಲ್ಲಿ ಬಸವಣ್ಣನನ್ನು ಬಾಯಿಗೆ ಬಂದಂತೆ ಜರೆಯಲಾಗಿದೆ. ಹೀಗೆ ಮಾಡಲಿಕ್ಕೆ ಕಾರಣವು ಅದಕ್ಕಿಂತ ಪೂರ್ವದಲ್ಲಿ ಬಂದಿರುವ ವಚನ ೧೦೦-೧೦೪ಗಳಲ್ಲಿ ಬಸವಣ್ಣನು ಈ ರೀತಿಯಾಗಿ ನುಡಿದುದು ಆಗಿದೆ— "ತುಡುಗುಣಿತನದಲ್ಲಿ ಪರವಧುವ ನೋಡುವ ಸರಸ ಬೇಡ.... ಕೂಳಸೊಕ್ಕು ತಲೆಗೇರಿ ರಾಣಿವಾಸದೊಡನೆ ಸರಸಬೇಡ" (ವ-೧೦೦); "ತೊರೆಯಿಂ ಬೋ ಪರನಾರಿಯರ ಸಂಗವ, ತೊರೆಯಿಂ ಬೋ ಪರಧನದಾಮಿಷ" (ವ. ೧೦೨); "ಕುಳ್ಳಿರ್ದು ಲಿಂಗವ ಪೂಜಿಸಿ ಅಲ್ಲದಾಟವನಾಡುವರಯ್ಯ ಬೆಳ್ಳಿತ್ತಿನ ಮರೆಯಲ್ಲಿ ಹುಲ್ಲೆಗಂಬುವ ತೊಡುವಂತೆ. ಕಳ್ಳಹಾದರಿಗನ ಕಯ್ಯಲ್ಲು ಪೂಜೆಯ ಕೊಳ್ಳ ನಮ್ಮ ಕೂಡಲಸಂಗಮದೇವ" (ವ. ೧೦೩); "ತನು ಶುಚಿಯಿಲ್ಲದವನ ದೇಹಾರವೇಕೊ" (ವ. ೧೦೪). ದುರಾಚಾರವನ್ನು

ಈ ಬಗೆಯಾಗಿ ಖಂಡಿಸಿದುದು, ಮತ್ತು ಶೀಲವನ್ನು "ನೋಡಲಾಗದು ನುಡಿಸಲಾಗದು ಪರಸ್ತ್ರೀಯ" (ವ. ೧೦೧) ಇಂತು ಹೇಳಿದುದು ದುರಾಚಾರಿಗಳಿಗೆ ಅಪಥ್ಯವೆನಿಸಿದೆ. ಈ ವಿಷಯದಲ್ಲಿ ಒಂದು ನಿರ್ಣಯವೆನ್ನುವಂತೆ ಮತ್ತು ಹಾದರವನ್ನು ಸಮರ್ಥಿಸುವಂತೆ—ಪೂರ್ವದಲ್ಲಿ ಬಂದಿರುವ ವಚನ ೧೦೩ ವನ್ನು ೫೩೧ ರಲ್ಲಿ, ೧೦೦ ವನ್ನು ೫೪೬ ರಲ್ಲಿ, ೧೦೨ ವನ್ನು ೫೪೮ ರಲ್ಲಿ, ೧೦೧ ವನ್ನು ೫೪೭ ರಲ್ಲಿ ಪುನಃ ಹೇಳಿ ಅವನ್ನು ಖಂಡಿಸುವಂತೆ—ಕೊನೆಯಲ್ಲಿ "ಹಾದರವಾಡಿ ಹರನನರ್ಚಿಸಿದಡೆ ದೋಷವಿಲ್ಲೆಂದ" (ವ. ೫೩೪), "ಹಾದರವಾಡುವ ನಿಮ್ಮ ಪಿಂಡಗಣಂಗಳೊಂದಿಗೆ ಗುಹೇಶ್ವರಲಿಂಗ ಅನುಭವ ಬೀರುವ ಕಾರಣವೇನು" (ವ. ೫೫೧), "ಅಂದ ತೆರದಿ ನಮ್ಮ ದೇವರು ಪದವಿಯ ಕೊಟ್ಟಡೆ ಹಾದರ ಮಾಡುವುದಯ್ಯಾ ನೀವು" [ಎಂದು ಷಟ್‌ಸ್ಥಲ ಚಕ್ರವರ್ತಿ ಚನ್ನಬಸವಣ್ಣನಿಂದ ನುಡಿಸಿ] (ವ. ೫೫೨) ಎಂಬುದಾಗಿ ಪ್ರತಿಪಾದಿಸಲಾಗಿದೆ.

## I9 ವಿಷ-ಅಮೃತ

ಈ ಗ್ರಂಥವ ಸಂಪಾದಕರು ಅದರ ಬಗ್ಗೆ ಮೆಚ್ಚುಗೆ ಪೂರ್ವಕವಾಗಿ "ವೀರಶೈವ ಧರ್ಮತತ್ವಗಳ ವಿವರಣೆ ದೃಷ್ಟಿಯಿಂದ ಇದು ಮಹತ್ತ್ವವಾದುದು" ಎಂದು ಪ್ರಸ್ತಾವನೆಯ ೧೬ ನೆಯ ಪುಟದಲ್ಲಿ ಹೇಳಿಕೊಂಡಿದ್ದಾರೆ. ಇದರಲ್ಲಿ ತಥ್ಯವೇನೂ ಇಲ್ಲ ಆದರೆ ತದ್ವಿರುದ್ಧವಾಗಿದೆ. ಸ್ವತಃ ಗ್ರಂಥಕರ್ತನೇ ಅದರ ಗುಣ, ಶೀಲ, ಯೋಗ್ಯತೆಗಳನ್ನು ಒಂದು ವಚನದಲ್ಲಿ ಹೇಳಿದ್ದಾನೆ.—ವಚನ (ಪು. ೨೦ ವ. ೪೯) ದಲ್ಲಿ "ನಾ ಪೇಳ್ವಂಗಲಿಂಗದ ಸಮರಸಬೋಧೆಯ ಪಾತಕರಿಗರುಹಿದೆಯಾದಡೆ ಸಕಲನಾಯಕ ನರಕಂಗಳಾಗದಿರ್ಪವೆ? ಇದು ಕಾರಣ ಇಂತಪ್ಪ ಬೋಧೆ ಇಂದ್ರಜಾಲದಾಟವಲ್ಲ ವೇದವಿಹಿತ ಜ್ಞಾನವಲ್ಲ ಆಗಮಭರಿತ ನುಡಿಯಲ್ಲ ಗುಹೇಶ್ವರಲಿಂಗ ತಮ್ಮ ರಾಣಿಯರಿಗರುಹಿದ ರಹಸ್ಯಸಂಜೀವನ ಬೋಧೆ ಕೇಳಾ" ಎನ್ನಲಾಗಿದೆ. ವೀರಶೈವರು ಸಮರಸಭಾವವನ್ನು ಲಿಂಗಾಂಗ ಸಮರಸವೆಂದು ಹೇಳುತ್ತಾರೆ. ಆದರೆ ಇಲ್ಲಿ 'ಅಂಗಲಿಂಗದ ಸಮರಸ'ವೆಂಬುದಾಗಿ ನುಡಿದುದಾಗಿದೆ. ಕಾರಣ 'ಅಂಗಲಿಂಗದ' ಎಂಬುದರಿಂದ 'ಶಿಶ್ನದ' ಎಂಬ ಅರ್ಥವು ಆಕ್ಷೇಪಣೀಯವಾದ ವಚನ ೩೨, ೩೩, ೫೧ ಗಳ ಹಿನ್ನೆಲೆಯಲ್ಲಿ

ಹೊರಡುವುದು; ಇಲ್ಲಿ 'ರಾಣಿಯರು' ಎಂಬ ಪದವು ವಚನ IV. ೨೫೧ ದಲ್ಲಿಯ ಪದ 'ಮಿಂಡಿಯರು' ಎಂಬ ಪದಕ್ಕೆ ಸಮಾನ ಭಾವಾರ್ಥವುಳ್ಳದ್ದಾಗಿರುವದು. ಅಲ್ಲದೆ "ರಾಣಿಯರಿಗರುಹಿದ ರಹಸ್ಯ ಸಂಜೀವನ ಬೋಧೆ" ಎಂಬುದರಿಂದ ಏನೂ ಅರಿಯದ ಭಾವನಾತ್ಮಕ ಮುಗ್ಧೆಯರನ್ನು ಅಲ್ಲದುದನ್ನು ಬೋಧಿಸಿ (Brain wash ಮಾಡಿ) ದುರ್ಮಾರ್ಗಕ್ಕೆಳಸುವ—ಕೊನೆಯಲ್ಲಿ ಪ್ರತಿಪಾದಿತ ಹಾದರಕ್ಕೆಳಸುವ—ಕಾರಣ ಇದನ್ನು ಪಾತಕರಿಗ[ಇದನ್ನೊಪ್ಪದವರಿಗೆ]ರುಹಿದೆಯಾದಡೆ [ಈ ಗ್ರಂಥವನ್ನು ಪ್ರಕಟಮಾಡಿದೊಡೆ] ಸಕಲನಾಯಕನರಕಂಗಳಾಗದಿರ್ಪವೆ' ಎಂಬ ಶಾಪ ನುಡಿಯನ್ನು ಆಡಲಾಗಿದೆ; ಮತ್ತು ಸ್ವಯಂ ಗ್ರಂಥಕರ್ತನೆ ಇದರ ಪ್ರಕಟನೆಗೆ ನಿಷೇಧದ ಕಟ್ಟನ್ನು ಹಾಕಿದ್ದಾನೆ ಹೀಗಿರಲು ಸಂಪಾದಕರು ಇದಕ್ಕೆ ತಮ್ಮ ಮೆಚ್ಚುಗೆಯನ್ನು ಹೇಳಿದುದು ಸರ್ವಥಾ ಸಲ್ಲದು; ಅದು ವಿಷಕ್ಕೆ (ಹಾದರವು ಸಮಾಜಕ್ಕೆ ಕಂಟಕವಾಗಿದೆ, ಷಟ್‌ಸ್ಥಲ ಸಾಧನೆಗೆ ವಿಷವಾಗಿದೆ) ಅಮೃತವೆಂದು ನುಡಿದಂತಾಗಿದೆ. ಆದುದರಿಂದ ಈ [ಮುಕ್ತಿಕಂಠಾಭರಣ] ಗ್ರಂಥ ಪ್ರಕಟನೆಯು ಅಕಾರ್ಯವಾಗಿದೆ.

————

# ಪರಿಶಿಷ್ಟ I

ಡಾ. ಅಪ್ಪಾಸಾಹೇಬ ಅಡಕೆ
ಬಿ. ಇ., ಪಿಎಚ್. ಡಿ., ಎಂ. ಆಯ್. ಇ.
ಕುಲಪತಿಗಳು

ಕರ್ನಾಟಕ ವಿಶ್ವವಿದ್ಯಾಲಯು,
ಧಾರವಾಡ-೩.
September 8, 1972.

*Shri G. M. Patil,*
*Retired Curator of Libraries*
*Gopalpur, Dharwar-580007.*

Sir,

With reference to your letter dated 5th September, 1972, I have to inform you that the literature* sent by you along with your letter dated 2nd August, 1972 has been noted. In this connection I write to say that the Advisory Committee for Vachana Literature has passed the following Resolution @ (copy enclosed). In view of this Resolution you will please see that there is no point in carrying on the controversy and that you will treat the matter as closed.

Thanking you,

*Yours faithfully*
*Sd/- x x x*
(*A. S. Adke*)

---

* Refers to the Article ಅಂಜನ printed as chapter I in this book.

@ Since the copy of the resolution is not attested, it could not be published here. However, the substance of it is mentioned in the letter to Dr. A. S. Adke, Vice-Chancellor, Karnatak University, Dharwar dated 12-9-72 given as Appendix II in this book.

# ಪರಿಶಿಷ್ಟ II

*From :* Dharwar-7
*G. M. Patil, Retd. Curator of Libraries* 12—9—72
*Gopalpur, Dharwar-7*

*Sub :*—The publication, Muktikanthabharana

Dear Sir,

I am thankful for your kind letter dated 8-9-72.

2. The resolution communicated to me does not meet the gravity of the situation. Muktikanthabharana was a text book for M. A. last year (This is not denied by Dr. R. C. Hiremath in his press statement). Seeing my review of the book in press, it has been dropped somehow. Further, there is no assurance, that it will not be revived some time later. Also, it is said that the published work is incomplete. This is belied by the print ಸಮಾಪ್ತ finish, at the end of the work. The say—in view of the incompleteness of the single manuscript on which the present work is based, it does not give a true and full picture of the topics discussed at the end—is not convincing. Hence, the book requires to be proscribed.

3. It will not satisfy any Lingayat, even one with a meagre knowledge and understanding of what Virasaivism is, and one will feel that it, as also the worshipful S'aranas of the 12th century are vilified in that book; and he will not rest content with it.

4. I have not heard of or seen such a book during my 30 years connection with libraries and books although I might have come accross, seen and browsed lakhs of books in libraries, with book-sellers and at Exhibitions.

5. Muktikanthabharana is worse than the book 'Boccaccio : Decameron' that was proscribed. If the latter

gives anecdotes of secret illicit intercourses that were going on in the Monasteries, Muktikanthabharana gives a sanction to debauchery by saying ಹಾದರಮಾಡದಿರೆ ಶಿವನ ಪೂಜೆಯುದೇಕೊ why should one worship S'iva, if he is not debaucherous; ಹಾದರ ಮಾಡಿ ಹರನನರ್ಚಿಸಿದಡೆ ದೋಷವಿಲ್ಲೆಂದ (V. 534) there is no sin if being debaucherous he worships s'iva. And in one Vacana sanctity is attached to debauchery. Further, the whole issue, stretched over 531 to 554 Vacanas, of debauchery is clinched in the last chapter named ಆಚಾರ ಪ್ರಶಂಸೆ commendable practices, by cynically expressing ಬಸವಯ್ಯನಾಜ್ಞೆ ಮುಸಿಯದಾಯಿತ್ತಲ್ಲ the vow of Basava (ಛಲಬೇಕು ಶರಣಂಗೆ ಪರಧನವ ಪರಸತಿಯುನೊಲ್ಲೆನೆಂಬಲ್ಲಿ S'arana must vow that he will not touch others' money and ladies) has been damaged. This is the bane of the work.

6. Worse still, in one vacana it is said ಅಂತಪ್ಪ ಜಂಗಮು ನಿನ್ನ ಸತಿ ಮುಟ್ಟಿದಡೆ ಪಾವನೆಯಲ್ಲದೆ ಪಾಪಿಯೆ: (V. 106) if such a Jangama touches (enjoys) your wife she would be holy and not wretched. Such a statement in a spurious vachna, is made in order to beguile innocent and trusting ladies and enjoy them.

7. The above is the crux of the matter. Now let me turn to another harmful and damaging aspect of the book Muktikanthabharana. It concerns the worshipful, the most revered Basavanna who is the founder of the Virasaiva religion (This is established in the Karnatak University publication, Basavesvara and his Times); and he is made the scape-goat or goat of sacrifice while upholding the practice of debauchery in this book, for condemning which he is abused in severe language by Prabhudeva (this is all fictitious) in the spurious vachanas

105-116 at a stretch, in such abominable words like ದುಷ್ಟ wicked, ಭ್ರಷ್ಟ detestable, ಭಂಡ blatant, ಹುಚ್ಚುಬಿದ್ದ ಶ್ವಾನನಂತೆ ಬೊಗಳಿ ಬೋಳಾದೆಯಲ್ಲ became useless by barking like a mad dog. If one examines as to what made Prabhudeva to abuse Basavanna like this, the preceeding vachanas 100–104 throw light into the matter.

8. For such abuses, the Editor pleads alibi by saying in an Explanatory (cyclostyled) Note issued since, that these were uttered by Prabhudeva in joke as said at a later moment. But this could be dismissed by the fact that Channabasava is made to abandon his life on hearing the derision of his Guru Basavanna.

9. Besides the voluminous derisive vacanas there are others—ಬಸವಯ್ಯನಾಡಿದುದು ನಿಜವಲ್ಲ. ಅತ ತಳವಿಲ್ಲದ ಮುಗಿಯು (II 32) what Basava has said is not true (reliable), for, he is like a bottomless pot; ಅಂತರಂಗ ಬಹಿರಂಗ ಆತ್ಮಸಂಗ ಒಂದೆಯೆಂಬ ಬಸವನ ನುಡಿ ಕಸವಾಯಿತ್ತಲ್ಲ (IV 359) the statement 'inwardness and outwardness and contact with (realisation of) Self are one and the same, of Basava is rendered trash'; ಸಂಗನಬಸವಯ್ಯನಾ ಚೆನ್ನ ಮುಸಿಯದಾಯಿತ್ತಲ್ಲ the vow of Sangana Basavayya (ಬಸವಣ್ಣ) has been spoilt. These speak of the motive of the author (compiler) of Muktikanthabharana in writing such spurious damaging vacanas. Thus, on the whole, the aim and object of the author is to make Basavanna a low, despicable and unreliable person in the eyes and estimation of the devout followers of Basavesvara and of Lingayat religion.

10. In the preceeding vacanas 100–4 Basavesvara proclaims ತುಡುಗುಣಿತನದಲ್ಲಿ ಪರವಧುವ ನೋಡುವ ಸರಸ ಬೇಡ do not take pleasure in looking stealthily (lustfully, longingly) at other's wives; ನೋಡಲಾಗದು ನುಡಿಸಲಾಗದು ಪರಸ್ತ್ರೀಯ do not see

and talk to others' ladies; ತೊರೆಯಿಂ ಬೋ ಪರನಾರಿಯರ ಸಂಗವ abandon the enjoyment of others' women; ಕುಳ್ಳಿರ್ದು ಲಿಂಗವ ಪೂಜಿಸಿ ಅಲ್ಲದಾಟವನಾಡುವರಯ್ಯ ಬೆಳ್ಳೆತ್ತಿನ ಮರೆಯಲ್ಲಿ ಹುಲ್ಲೆಗಂಬುವ ತೊಡುವಂತೆ while worshipping Linga in a sitting pose persons play (Basavanna condemns such traits) that which is forbidden, just like a hunter who sitting unseen behind a white bull aims an arrow at a deer; ತನು ಶುಚಿಯಿಲ್ಲದವರ ದೇಹಾರವೇಕೋ why should a person who is not holy in body, be worshipped? These utterances of Basava make the author (compiler) who subsequently means to uphold debauchery, become red with anger and abuse Basava in such (Vide para 7&9) bad damning language.

11. For discerning the gravity of the matter, one has to visualise the unprecedented equality and freedom of worship conceded to ladies in Virasaivism. Ladies also worship ಇಷ್ಟ ಲಿಂಗ Istalinga,as also worship the Guru & Jangama by washing their feet etc. Thus it became necessary for Basavanna, who is the founder of the religion, to caution and warn the worshipped not to indulge in such bad traits as mentioned above.

12. Another similar alibi put forth by the Universitry Editor is that there are other vacanas—

(a) in doing so, he has given a distorted and twisted view in his article on Muktikanthabharana given in the periodical 'Paranjoti' (August 1972) and has given only a portion of the Vacana IV. 113 so as to make it look praiseworthy (which in effect is deriding) of Basava, and omitted the line which reflects the true character of the Vacana as containing the words ಭ್ರಷ್ಟ ಬಸವಾ.

(b) Similarly, he has used the expression ಗುಹೇಶ್ವರನ

ಶರಣರು ನುಡಿದು ಸೂತಕಿಗಳಲ್ಲ in a contrary sense. This expression is used in Sunyasampadane in the context of ನಿಶ್ಶಬ್ದಂ ಬ್ರಹ್ಮ ಉಚ್ಯತೇ. But the University Editor wishes to exonerate the so-called Prabhudeva from blame for his act of abusing Basava and therefore uses this expression in support of the contemptuous abuses Prabhudeva has showered on Basava and make Prabhudeva nevertheless look blameless, despite his abusing. What an intellectual feat of distortion?

in this book which speak highly of Basavanna; thus, the intention of the author (or the alleged Prabhudeva) is not to damn Basavanna. But these Vacanas are scattered here and there and are out of the mark—rather they are so to say a cloak to hide the author's intentions—and they fade into insignificance as compared to the volume and intensity of these abuses. Also it may be recalled to mind that a drop of poison harms a pot of nector, and the Kannada proverb ಅಡಿಕೆಗೆ ಹೋದ ಮಾನ ಆನೆ ಕೊಟ್ಟರೂ ಬಾರದು. Thus, it is established that the author (compiler) has deliberately damaged (by attributing the Vacanas to Prabhudeva) the reputation of Basava, the founder of Virasaivism and a worshipful personality.

13. Further, the book Muktikanthabharana depicts ಸಮರಸ ಭಕ್ತಿ in a contemptuous, despicable and ludicrous manner by giving similies of human sexual intercourse as well as of snakes. This is briefly dealt in my article ಅಂಜನ submitted with my letter dated 2nd Aug. 1972.

14. The author has implicitly and suggestively spoken ill of Nilamma, the wife of Basavanna. It is better not to explain it here.

15. What the alleged Prabhudeva has said in the spurious vachana about Basavanna, Nilamma and about

Samarasa bhakti, depicts a bad image of him only. It is no good to dilate on this also.

16. The compiled work Muktikanthabharana is in the manner of fiction cum drama. It contains untruths. Hence, it cannot be looked upon as a treatise on Virasaiva philosophy and religion as asserted by the Editor. This is dealt in article No. 6 in Navasandesh dated 5-7-72.

17. **Author** : Although it is stated in the preface to the book that the author of the work Muktikanthabharana is unknown, the Explanatory (cyclostyled) Note since issued from the University (probably by its Editor) mentions Siddhaviraswami alias Siddhaviradesikendra alias Siddhaviradeva; and with regard to the last name it quotes the authority of Karnatak Kavicarite wherein the name Siddhaviradeva is sententiously mentioned with reference to his pen name ಅಂಕಿತ only. However, the Editor goes on to attribute to him the authorship of 7 works for which no authority is quoted. Thus, the whole thing is untenable.

18. **Manuscript** : In the preface of Muktikanthabharana nothing is said—this is quite strange—regarding the whereabouts of the manuscript, its material, the condition etc. This issue was raised in article No 4 in Navasandesh dated 14-6-72. The Editor seems to have deliberately omitted this matter in the Preface & kept mum over the matter–although a question was raised about it—in the Explanatory Note issued latter on. However, a research on it has revealed the fact that it is a paper manuscript and its source of acquisition is Shivayogamandira.

19. **Time** : A further study and examination of the work reveals that it is not a classical ancient work, but one of quite recent date. Its date is fixed about 1920s from internal evidences.

20. **Survey**: A preliminary survey of the spuriousness of the work reveals the following results :—

| Author of Vacanas | No. of Vacanas in the work | No of genuine vacanas found in authoritative publications. | No. of spurious vacanas. |
|---|---|---|---|
| (1) Prabhudeva | 265 | 30 | 235 |
| (2) Channabasava | 82 | 14 | 68 |
| (3) Basavanna | 100 | 77 | 23 |
| (4) Siddharama | 71 | 43 | 28 |
| (5) Madivala Machideva | 110 | — | 110 |
| (6) Nilamma | — | — | 8 |
| (7) Akka Nagamma | — | — | 8 |

Remarks :— The author (compiler) has deliberately planned to create a wrong impression that his work is genuine by drafting a large number of real Vacanas of Basava into this compilation. But the preponderance of spurious Vacanas as revealed here, establishes that it is on the whole a spurious compilation done with a malafide make-believe motive.

21. I feel the Editor of Muktikanthabharana has utterly failed in his duty in that :—

(a) While selecting the work for publication, he has not assessed the merits and demerits of the work;

(b) He has not examined whether it is a genuine or spurious work;

(c) He has not examined the spurious Vacanas and studied their repercussions on the Virasaiva precepts, practices, beliefs and on the character of eminent Saranas;

(d) He has not thought whether what is said about Saranas is true and reliable or otherwise, and whether it affects the reputation of the Saranas;

(e) He has failed to visualise the harmful effects of the scurrilous Vacanas on Saranas, the notions about Samarasa bhakti and chastity;

(f) He has not realised that the objectionable Vacanas are immoral and unethical;

(g) When the author (compiler) himself has dubbed the work as being secret (harmful, sinful) knowledge not to be imparted to non-followers (ಪಾತಕರು) and cursed it by saying, if done so, the doer would go to the greatest Hell (V. II- 49), what justification would the Editor find for publishing it;

(h) The punctuation marks used, and the breaking up of the running lines into short ones as in verse have been ridiculous (Pl. vide articles No. 2 & 3 in Navasandesh dated 24–5–72 and 7-6–72);

(i) In short, he has not applied his mind for its editing;

(j) The Editor is, post-facto, offering some sort of explanations in defence of his work but they prove to be lame excuses and fall flat like a pack of cards.

He is responsible for his failures.

22. In spite of the fact of its being a cursed, damnable and detestable work, the Editor has paid glowing tributes to it in the Preface, on page 14. This is the highest irony of it. The similies and metaphors used in it are exposed in the articles appearing in Navasandesh

dated 9-8-72 and 16-8-72 and shown how base the work is.

23. In this connection I may invite your kind reference to the Press statement issued by Dr. R. C. Hiremath, the Editor of the work (pl. vide Samyukta Karnatak dated 4-9-72). In doing so, he has arrogated to himself the whole and sole authority of the University and posed the threat of closing the Vacana Vangmaya Scheme. This is neither understandable nor appreciable.

24. Thus, the book Muktikanthabharana is harmful and damaging. It casts a slur on and places a stigma on Virasaivism, on the revered ancient Saranas like Basava, Channabasava, Prabhudeva, Nilamma etc. It also leaves a stigma on the Editor and the Karnatak University itself. Thus, this dastardly, perfedious and blasphemous work needs be proscribed.

25. Hence I request you to kindly take necessary steps to proscribe the work. The matter may please be placed before the Syndicate.

With respectful rsgards,

*Yours sincerely,*
*G. M. Patil*

*To,*

*Dr. A. S. Adke, B. E., Ph. D.*
*Vice-Chancellor, Karnatak University*
*Dharwar-3.*

# ಪರಿಶಿಷ್ಟ III

*From : G. M. Patil, Retd. Curator of Libraries,*
*Gopalpur, Dharwar-7.* *Dharwar-7, 30th Oct., 1972.*

*Sub :*— The Publication, Muktikanthabharana Proscription of—

Dear Sir,

I am writing this letter in continuation of the earlier one to your honour dated 12-9-1972, on the above subject submitting that the Advisory Committee Resolution does not meet the situation, and that the book needs be proscribed.

2. The proscription of the book entails the following steps— (i) destruction of all the copies with the University and its book-sellers, and of the copies in the libraries of its organs and institutions, (ii) issue of a circular to the affiliated colleges and institutions advising them to take similar action with regard to copies in their libraries, (iii) bringing this fact to the notice of Govt. so that they could do whatever is expedient in the matter, (iv) the publication of this fact in the University Bulletin and in the Press for general information.

3. A book is withheld from circulation, not because it is incomplete, but that it contains objectionable matter. If the history of proscribed and forbidden literature is studied, this will be quite clear. The book Bijjalarayacharite of Dharani Pandit is an instance in point. So, I trust your honour will be good enough to announce the truth of the matter.

4. Its non-proscription inheres the possible and potential harm and damage—

(a) since human memory is weak, the book or part of it, might be prescribed as a text-book in future,

(b) the book might] circulate through underground channels,

(c) some of the vachanas from this spurious book have been lifted and included in the authoritative editions of the Karnatak University publications viz., Vachanas of (i) Basavanna, (ii) Siddharama, (iii) Gangambike etc.; in the former two they are given in a separate part as Addenda, but not done so with regard to the last,

(d) there are still some Vachanas in Muktikanthabharana which have escaped the notice of its Editor and hence not given in the above publications. These might be added to in subsequent editions of these, which would be wrong,

(e) Similarly the Vachanas of Saranas, hitherto not published by the University, might comprise those from Muktikanthabharana as genuine Vachanas in future publications. This would be a grievous wrong,

(f) It lends currency and historicity to imaginary, un-historical, concocted, machinated anecdotes and episodes narrated in Muktikanthabharana,

(g) this sort of vicious chain action and reaction will set in.

5. I therefore request your honour to kindly take necessary steps to proscribe the book Muktikanthabharana. This matter may please be placed before the Syndicate for the purpose.

With respectful regards,

*Yours sincerely,*
*G. M. Patil*

*To, Dr. A. S. Adke, B.E., Ph. D.*
*Vice-Chancellor, Karnatak University, Dharwar-3.*

## ಪರಿಶಿಷ್ಟ IV

*From :*

*G. M. Patil, Retd. Curator of Libraries,* *Dharwar–7*
*Gopalpur, Dharwar–7.* *6th Nov., 1972*

*Sub :—* The Publication, Muktikanthabharna Proscription of—

*Ref :—* My letter dated 12–9–72
—do— 30–10–72

Dear Sir,

I am writing this letter to your honour to point out the mischief done in the editing of the work Muktikanthabharana.

(1) To the word ಸಿತಗ (sitaga) occurring in vachana IV 546 the meaning ಜಾರ (whore) has been given in the glossary of difficult words on page 217. This is both wonderful and damaging. Prof. Basawanal has given the meaning ಕಟ್ಟುವ ( harsh ) to that word on page XL of Basavanna's Vachanas edited by him. This very Vachana has appeared in Kar. Univ. publication (1968) under No. 642; and for the word ಸಿತಗ (sitaga) coming therein the meaning ನಿಷ್ಠುರ (strict) ಕಠೋರ (harsh) ಕಡುಕ is given in the glossary.

The context is ಒಡೆಯನರಸಿಯರು ಸರಸಬೇಡ ಕೊಳಸೊಕ್ಕು ತಲೆಗೇರಿ ರಾಣಿವಾಸದೊಡನೆ ಸರಸಬೇಡ, ಕೂಡಲಸಂಗಮದೇವ ಕಡುಸಿತಗನಯ್ಯ, do not behave amorously with Masters' ladies. The idea is that one should not indulge in amorous behavior with ladies; if done so, God will punish. Hence the word ಸಿತಗ (sitaga) means harsh and strict. And to give it a meaning as whore is both damnable and mischevous.

Is it that the Editor conceives that the book Muktikanthabharana is one preaching debauchery and meant for whores and thus the word ಸಿತಗ (sitaga) means here a debaucherous person? This is highly mischievous. To say that God is a whore is at once silly and something that cannot be tolerated.

(2) The text Muktikanthabharana mentions at two places, P. 103 and 64, that Revanasiddha had three hundred wives. But in the preface written by the Editor, the fact is distorted and mangled. It is deliberately done so at three places; it is stated at two places that Revanasiddha had three hundred daughters and at one place it is stated that he had one wife. Please vide (i) page 14 lines 27–28 ರೇವಣಸಿದ್ಧೇಶ್ವರಂ ಆತನ ಮುನ್ನೂರು ಕನ್ನೆಯರು Revanasiddhesvara and his three hundred daughters, (ii) page 10 lines 7–8 ರೇವಣಸಿದ್ಧೇಶ್ವರನ ಮುನ್ನೂರು ರಾಜಕುಮಾರಿಕೆಯರು three hundred princely daughters of Revanasiddhesvara (iii) page 7 line 15 the number three hundred has been done as one ತನ್ನಂಗನೆ ಮುನ್ನೊರ್ವರ his wife former one, whereas the text on page 64 gives ತನ್ನಂಗನೆ ಮುನ್ನೂರ್ವರ his three hundred wives.

This sort of tampering is highly objectionable and quite unbecoming of a University publication and its editing.

*Yours sincerely,*
*G. M. Patil*

*To,*
*Dr. A. S. Adke, B.E., Ph.D.*
*Vice-Chancellor, Karnatak University: Dharwar-3.*

# ಶುದ್ಧಿಪತ್ರಿಕೆ

| ಪುಟ | ಸಾಲು | ತಪ್ಪು | ಸರಿ |
|---|---|---|---|
| ೨೪ | ೧೬ | ಗರಿದಿದ್ದಾರೆ | ಗರೆದಿದ್ದಾರೆ |
| ೨೬ | ೧೪ | Bibiography | Bibliography |
| ೩೬ | ೧೫ | ವಚನಗಳೊಲ್ಲಂದ | ವಚನಗಳಲ್ಲೊಂದ |
| ೫೨ | ೭ | ಅಂತ್ಯವಾಗಿದ್ದಿರೆ | ಅಂತ್ಯವಾಗಿದ್ದರೆ |
| ೫೪ | ೪ | ಚಿನ್ನಗಳ | ಚಿನ್ಹಗಳ |
| ೬೩ | ೮ | ಮರುಹುಗುಣ | ಮರಹುಗುಣ |
| ೬೪ | ೨೧ | ಪಾರಮರ್ಥ | ಪಾರಮಾರ್ಥ |
| ೭೮ | ೧೯ | ಅ್ಯಡ್ಯಾಮನ | ಅ್ಯಡ್ಯಾಮನು |
| | ೨೪ | ನಿಷಿದ | ನಿಷಿದ್ಧ |
| ೮೭ | ೧೧ | ದಾರ್ಷ್ಟ್ಯ | ಧಾರ್ಷ್ಟ್ಯ |
| ೮೯ | ೧೭ | ಗುರುಪ್ರಶಂಸೆ | ಗುರುಪಾದೋದಕ ಪ್ರಶಂಸೆ |

---

# ಗ್ರಂಥಸೂಚಿ

ನಿರ್ದೇಶಕ ಅಂಕಿಗಳು ಅಧ್ಯಾಯ ಇಲ್ಲವೆ ಪರಿಚ್ಛೇದ ಸಂಖ್ಯೆಗಳನ್ನು ಸೂಚಿಸುತ್ತವೆ, ಪುಟ ಸಂಖ್ಯೆಗಳನ್ನಲ್ಲ; ಅವು ದಶಾಂಶ ರೂಪದಲ್ಲಿವೆ.


ಅಂಜನ I<br>
ಕರ್ತವ್ಯಚ್ಯುತಿ A77, D42, D7<br>
ಕಲ್ಪಿತ ವಚನ I3<br>
  ಸಂಗತಿ D51<br>
ಗಂಗಾಂಬಿಕೆಯ ವಚನ B8, 91<br>
ಗ್ರಂಥ (ಮುಕ್ತಿಕಂಠಾಭರಣ) B<br>
  ಅಸತ್ಯಸಂಗತಿ E6, E8<br>
  ಕಂಚುಕ B3<br>
  ಕೃತ್ರಿಮತೆ B2, B4, D51<br>
  ಖಂಡನೀಯ E74, G1<br>
  ಗತಿ E1–5<br>
  ಚೋರಕೃತಿ B5–99<br>
  ಮತಿ E7–79<br>
  ಮೌಲ್ಯಮಾಪನ H<br>
    ಅಂಗ F3<br>
    ಅಂತರಂಗ F5<br>
    ಆಚಾರ F51–63, G4<br>
    ಗುಣ F2<br>
    ದುಷ್ಟವಿಚಾರ F4<br>
    ನಿಷ್ಕರ್ಷೆ H6<br>
    ಪ್ರಮಾಣ F32<br>
    ಸ್ವರೂಪ F1<br>
    ಸುಧೆ H7<br>
    ಪಠಿತ B1<br>
    ಸಂಕಲನ B2<br>
ಗ್ರಂಥಕರ್ತ C, A7, H4, I2<br>
  ಅನಾಮಧೇಯ C5<br>
    ಕಾಲ C6<br>
    ಕೀಳುಮನ E72, F64<br>
    ಮನೋರಂಗ F65, H72<br>
  ಸಂಪಾದನೆಯ ಸಿದ್ಧವೀರಣಾಚಾರ್ಯ H4<br>
  ಸಿದ್ಧವೀರದೇವ A77, C1–4<br>
  ಸಿದ್ಧವೀರದೇಶಿಕೇಂದ್ರ C2, 4<br>
  ಸಿದ್ಧವೀರಸ್ವಾಮಿ C1–2, 4<br>
ಗ್ರಂಥಗಾತ್ರವರ್ಧನ ತಂತ್ರ A5–51<br>
ಗ್ರಂಥಸೂಚಿ A42<br>
ಚನ್ನಬಸವಣ್ಣನವರ ವಚನ B94, G3<br>
ದುರ್ಮಾರ್ಗ E76–7, I8<br>
ದುರುಳ ವೇದಾಂತ F63<br>
ನಾಗಲಾಂಬಿಕೆಯ ವಚನ B8-91<br>
ನೀತಿ F8<br>
ನೀಲಮ್ಮ G6<br>
  ನ ವಚನ B8, 91<br>
ಪ್ರಭುದೇವ G8<br>
  ನ ವಚನ B96<br>
ಪ್ರಸ್ತಾವನೆ D5–54<br>
ಪುಸ್ತಕಶಾಸ್ತ್ರ A44

ಪಾರ್ಕಿನಸನ್ನನ ಸೂತ್ರ A1, A6-63
ಪಾದೋದಕ F31, H5
ಬಸವಣ್ಣ G5
ನ ನಿಂದೆ E78, E81, F7, G5
ಮುಖಭಂಗ I6
ವಚನ B93, G2
ಬಾಲಸಂಗಯ್ಯ E84
ಮಂಕುಬೂದಿ F9, H31-2
ಮಡಿವಾಳ ಮಾಚಿದೇವ G7
ನ ವಚನ B9
ರದ್ದಿ A9-92
ಇತಿಹಾಸ A92
ದಾಖಲೆ A91
ಲಿಂಗ E72, H5
ಇಷ್ಟಲಿಂಗ E71
ಲಿಪ್ಯಂತರ A43
ವಚನಗಳ ವರ್ಣಾನುಕ್ರಮ A51
ಸಂಕಲನ B2
ವಿಮರ್ಶೆ A76, H1
ಅಂತರಂಗ D4-42
ಬಹಿರಂಗ D1-32
ವಿಷ I9
ಶಬ್ದಾರ್ಥ D6
ಸಂಪಾದಕರು A71
ಸಂಪಾದನಾ ಕಾರ್ಯ D, H2
ಅಂತರಂಗ D4-42
ಗಾತ್ರ D12-4
ತಪ್ಪುದೋಷ A53, D21, D53-4
ಪಾಠಶುದ್ಧಿ A75, D4, I5
ಪಾದರಚನೆ D11
ಬಹಿರಂಗ D1—32
ಮೈಕಟ್ಟು D3
ವಿಮರ್ಶೆ A76
ವಿರಾಮಚಿಹ್ನ D2
ಸಮರಸ E71, F41-2, 61, H6, I7
ಸಿದ್ಧರಾಮನ ವಚನ B95
ಹಸ್ತಪ್ರತಿ A74, C7-73
ಹಾದರ F71, H6, I8—9
ಜ್ಞಾನಬೋಧೆ A4
Coefficiency of Inefficiency A63
Kitchen Department A61,7
In-laws and outlaws A6-1
Law of Profits A62
Parkinson (S. Northcote) A 6

'ಮುಕ್ತಿಕಂಠಾಭರಣ'ದಲ್ಲಿ ಮಹಾನುಭಾವಿ ಹಾಗು ವೀರಶೈವ ಧರ್ಮ-ಸಂಸ್ಥಾಪಕರಾದ ಬಸವಣ್ಣನವರನ್ನು ದುಷ್ಟ ಭ್ರಷ್ಟ ಭಂಡ, ಹುಳಬಿದ್ದ ಶ್ವಾನನಂತೆ ಬೊಗಳಿ ಬೋಳಾದವ ಎಂದು ನಾನಾ ಪರಿಯಾಗಿ ನಿಂದಿಸಲಾಗಿದೆ; ಅವರ ಘನ ಕಾರ್ಯದ ಕುರಿತು 'ಮೂವತ್ತಾರು ಸಂವತ್ಸರ ಮಾಡಿದ ಭಕ್ತಿ ಹೋಮದಲ್ಲಿ ಕತ್ತೆ ಮೂತ್ರ ಬಿಟ್ಟಂತಾಯಿತ್ತು' ಎಂದು ಅವಹೇಳನ ಮಾಡಲಾಗಿದೆ.

ಹೀಗೆ ನುಡಿದವನಾರು? ಪ್ರಭುದೇವ; ಅವನು ೧೨ನೆ ಶತಮಾನದ ದಿವ್ಯ ಪುರುಷನಲ್ಲ; ಅನಾಮಿಕ ದುಷ್ಟ ಗ್ರಂಥಕರ್ತನು ಸೃಷ್ಟಿಸಿದ ವ್ಯಕ್ತಿ; ಗ್ರಂಥಕರ್ತನು ಪ್ರಭುದೇವರ ವಚನಾಂಕಿತವಾದ 'ಗುಹೇಶ್ವರ' ಪದವನ್ನು ಓದುಗರನ್ನು ವಂಚಿಸಲು ಬಳಸಿದ್ದಾನೆ; ಈ ಕಾಲ್ಪನಿಕ ಪ್ರಭುದೇವನು ದುಷ್ಟ ಜಂಭಕೋರ ಅಹಂಕಾರಿ ವಂಚಕ ಮನೆಮುರುಕ ವಿಷಯಾಸಕ್ತ ಹಾದರಿಗ ದುರ್ನೀತಿ-ಬೋಧಕ. ಇದರಿಂದ ೧೨ನೆ ಶತಮಾನದ ಪ್ರಭುದೇವರಿಗೆ ಕಲಂಕ ಹಚ್ಚಲಾಗಿದೆ.

ವೀರಶೈವರ ಮೇಲ್ತರಗತಿಯ ಭಕ್ತಿಯಾದ ಸಮರಸಭಾವವನ್ನು ಕೀಳಾಗಿ ಗಣಿಸಿ ವಿವರಿಸಿ ಸಂಭೋಗವೆ ಸಮರಸವೆಂದು ಧ್ವನಿ ಹೊರಡುವಂತೆ ಹೇಳಲಾಗಿದೆ; ಇದು ತೀರ ಖಂಡನೀಯ ನಿಂದನೀಯ; ಇದರಿಂದ ವೀರಶೈವ ಧರ್ಮ ನೀತಿ ಶೀಲ ಆಚಾರ ವಿಚಾರಗಳಿಗೆ ಘೋರ ಕಲಂಕ ಹಚ್ಚಲಾಗಿದೆ. ಇದು ವೀರಶೈವರಿಗೆ ಅಪಮಾನಕರವಾಗಿದೆ.

ಸಮಾಜದಲ್ಲಿ ದುರುಳರು ವಾಕ್ ಚಾತುರ್ಯದಿಂದ ತಮ್ಮ ಸುಖಭೋಗಕ್ಕಾಗಿ ಅನ್ಯರನ್ನು ಎಂತು ಮೋಸಗೊಳಿಸುವರು ಎಂಬುದು ಕಂಡುಬರುವುದು.

ಮುಕ್ತಿಕಂಠಾಭರಣವು ದುರ್ಬುದ್ಧಿ ದುರಾಚಾರ ದುರ್ಭಾವನೆಗಳ ಪ್ರತೀಕವಾಗಿದೆ. ಇಂತಹ ಹೇಯ ಹೀನ ತುಚ್ಛ ಅಧಮವಾದ ಹಾಗು ಗ್ರಂಥಕರ್ತನ ಹೆಸರಿಲ್ಲದ ಆಧುನಿಕ ಗ್ರಂಥವನ್ನು ಪ್ರಾಚೀನ ಹಾಗು ಮಹತ್ವದ ಗ್ರಂಥವೆಂದು ವಿಕಟ ಬುದ್ಧಿಯಿಂದ ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟಿತವಾಗಿದೆ. ಇದರ ಸಂಪಾದಕರು ಡಾ. ಆರ್. ಸಿ. ಹಿರೇಮಠ.